

ಕರ್ನಾಟಕ ಸರ್ಕಾರ

ಅರಣ್ಯ ಇಲಾಖೆ

Forest Depot

# ವಾರ್ಷಿಕ ವರದಿ

1994-95

# ಕರ್ನಾಟಕ ಸರ್ಕಾರ

# ವಾರ್ಷಿಕ ವರದಿ

## ಅರಣ್ಯ ಇಲಾಖೆ

## 1994–95



# ಸೂಚಿಕೆ

# ಕೋಷ್ಟಕಗಳು

# ಕರ್ನಾಟಕ ಸರ್ಕಾರ

## 1994-95ನೇ ಸಾಲಿನ ಅರಣ್ಯ ಇಲಾಖೆಯ ವಾರ್ಷಿಕ ವರದಿ

### 1. ಅರಣ್ಯ ಪ್ರದೇಶ

ಕರ್ನಾಟಕ ರಾಜ್ಯದಲ್ಲಿರುವ 1,90,498 ಚ.ಕಿ.ಮೀ ಭೂ ಪ್ರದೇಶದಲ್ಲಿ 38,723.56 ಚ.ಕಿ.ಮೀ ನಷ್ಟು ಭೂ ಪ್ರದೇಶವು ಅರಣ್ಯ ಇಲಾಖೆಯ ಸ್ವಾಧೀನದಲ್ಲಿದೆ. ಅರಣ್ಯ ಪ್ರದೇಶವನ್ನು ಮೀಸಲು ಅರಣ್ಯ ಸಂರಕ್ಷಿತ ಅರಣ್ಯ, ವರ್ಗೀಕರಿಸದ ಅರಣ್ಯ ಸಿ ಮತ್ತು ಡಿ ವರ್ಗ ಸೇರಿ ಗ್ರಾಮ ಅರಣ್ಯ ಮತ್ತು ಖಾಸಗೀ ಅರಣ್ಯವೆಂದು ಕಾನೂನು ಬದ್ಧ ವಿಂಗಡಣೆ ಹೊಂದಿದೆ. ಜಿಲ್ಲಾವಾರು ಮತ್ತು ವಿಭಾಗೀಯವಾರು ಅರಣ್ಯ ಪ್ರದೇಶವನ್ನು ಕೋಷ್ಟಕ-1ರಲ್ಲಿ ತೋರಿಸಲಾಗಿದೆ. ಕೋಷ್ಟಕ-3ರಲ್ಲಿ ಜಿಲ್ಲಾವಾರು ಅರಣ್ಯ ಪ್ರದೇಶವನ್ನು ವಿವಿಧ ವರ್ಗಗಳಲ್ಲಿ ತೋರಿಸಿದೆ. ಕೋಷ್ಟಕ 4ರಲ್ಲಿ ಇಲಾಖೆಯ ಆಡಳಿತ ವ್ಯವಸ್ಥೆಯ ವಿವರವನ್ನು ಕೊಡಲಾಗಿದೆ.

### 2. ಇಲಾಖೆಯ ಆಡಳಿತ ವ್ಯವಸ್ಥೆ

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಇಲಾಖೆಯ ಮುಖ್ಯಸ್ಥರಾಗಿದ್ದು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅಭಿವೃದ್ಧಿ), ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ಸಾಮಾಜಿಕ ಅರಣ್ಯ), ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ವನ್ಯಜೀವಿ) ಹಾಗೂ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ಕಾರ್ಯಯೋಜನೆ ಮತ್ತು ಅಭಿವೃದ್ಧಿ) ಅರಣ್ಯ ಸಂರಕ್ಷಣಾಧಿಕಾರಿ ಇವರು ಅವರಿಗೆ ಸಂಬಂಧಪಟ್ಟ ವಿಭಾಗಗಳಿಗೆ ಮುಖ್ಯಸ್ಥರಾಗಿರುತ್ತಾರೆ. ಪ್ರಧಾನ...

ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು, ಆಡಳಿತ, ಆಯವ್ಯಯ ಮತ್ತು ಹಣಕಾಸು ಲೆಕ್ಕ ಮತ್ತು ಲೆಕ್ಕ ಪರಿಶೋಧನೆ ಮುಂತಾದವುಗಳನ್ನು ನಿರ್ವಹಿಸುತ್ತಾರೆ. ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಅರಣ್ಯ ಪದಾರ್ಥಗಳ ವಿಲೇವಾರಿ, ಅರಣ್ಯ ಆಧಾರಿತ ಕೈಗಾರಿಕೆಗಳು ಮುಂತಾದವನ್ನು ನಿರ್ವಹಿಸುತ್ತಾರೆ. ಅರಣ್ಯ ಸಂರಕ್ಷಣಾಧಿಕಾರಿ (ಅಭಿವೃದ್ಧಿ) ಯವರು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಯವರ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ಅಭಿವೃದ್ಧಿ)ಯವರು ಇಲಾಖೆಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಿರ್ವಹಿಸುತ್ತಿದ್ದಾರೆ. ಅ.ಪ್ರ. ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ಸಾಮಾಜಿಕ ಅರಣ್ಯ) ಅ.ಪ್ರ. ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ವನ್ಯಜೀವಿ) ಮತ್ತು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ಕಾರ್ಯಯೋಜನೆ ಮತ್ತು ಅಭಿವೃದ್ಧಿ) ಇವರುಗಳ ಅವರವರ ಸಂಬಂಧಪಟ್ಟ ಇಲಾಖೆಯ ವಿಭಾಗಗಳನ್ನು ನಿರ್ವಹಿಸುತ್ತಿದ್ದಾರೆ. ಸರ್ಕಾರಿ ಆದೇಶ: ಎಫ್.ಇ.ಶಾ.93:ಎಫ್.ಇ.ಜ.93, ದಿನಾಂಕ 28—6—93ರ ಪ್ರಕಾರ ಅರಣ್ಯ ಸಂರಕ್ಷಣಾಧಿಕಾರಿ(ವಿಜಿಲೆನ್ಸ್) ಇವರ ಅಧೀನದಲ್ಲಿದ್ದ ಎಲ್ಲಾ ಸಂಚಾರಿ ಘಟಕಗಳನ್ನು ಈಗ ಸಂಬಂಧಿಸಿದ ಪ್ರಾದೇಶಿಕ ವಿಭಾಗ ಹಾಗೂ ವೃತ್ತ ಕಛೇರಿಗಳ ಅಧೀನಕ್ಕೆ ಒಳಪಡಿಸಲಾಗಿದೆ. ಅರಣ್ಯ ಸಂರಕ್ಷಣಾಧಿಕಾರಿ(ಪಶ್ಚಿಮ ಘಟ್ಟ ಅಭಿವೃದ್ಧಿ ಯೋಜನೆ) ಯವರ ಹುದ್ದೆಯನ್ನು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ದರ್ಜೆಗೆ ಏರಿಸಲಾಗಿದೆ. ಅದರ ಪ್ರಕಾರ ಹೊಸ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಹುದ್ದೆಯನ್ನು ರಚಿಸಲಾಗಿದೆ. ಆಡಳಿತ ವ್ಯವಸ್ಥೆಯ ಒಂದು ಪಟ್ಟಿಯನ್ನು

...3

ಕೋಷ್ಟಕ- 4ರಲ್ಲಿ ನೀಡಲಾಗಿದೆ.

೭. ಇಲಾಖೆಯ ಕಾರ್ಯಕಲಾಪಗಳು

ಅರಣ್ಯಗಳ ನಿರ್ವಹಣೆ, ವನ್ಯಜೀವಿ ಸಂರಕ್ಷಣೆ, ಹಾಳಾದ ಅರಣ್ಯಗಳ ಪುನರ್ ನಿರ್ಮಾಣ, ಬಂಜರು ಪ್ರದೇಶಗಳಲ್ಲಿ ವನ್ಯ ನಿರ್ಮಾಣ ಮತ್ತು ವಿಸ್ತರಣೆ, ಕೃಷಿ ಪ್ರದೇಶಗಳಲ್ಲಿ ಮರ ಬೆಳೆಸುವುದು ಸೇರಿದಂತೆ ಸಾಮಾಜಿಕ ವನ ನಿರ್ಮಾಣ ಕೈಗೊಳ್ಳುವುದು. ವನ ನಿರ್ಮಾಣದ ಮೂಲಕ ಭೂಸಾರ ಸಂರಕ್ಷಣೆ, ಚಿಕ್ಕಪುಟ್ಟ ಚೌಬೀನೆ, ಉರುವಲು ಸೌದೆ ಹಸಿರು ಗೊಬ್ಬರ, ದನಗಳ ಮೇವು, ಸಣ್ಣ ಅರಣ್ಯೋತ್ಪನ್ನ ಹಾಗೂ ಗೃಹ ನಿರ್ಮಾಣಕ್ಕಾಗಿ ಚೌಬೀನೆ ಮತ್ತು ಕುಶಲ ಕರ್ಮಿಗಳಿಗೆ ಮತ್ತು ಇತರೆ ಆರ್ಥಿಕವಾಗಿ ಹಿಂದುಳಿದವರಿಗೆ ವಿಶೇಷವಾಗಿ ಗುಡ್ಡಗಾಡು ಜನರಿಗೆ ಬೇಕಾಗುವ ಅತ್ಯಗತ್ಯ ಕಚ್ಚಾ ಸಾಮಾಗ್ರಿಗಳ ಬೇಡಿಕೆಗಳ ಪೂರೈಕೆ ಇವು ಇಲಾಖೆಯ ಮುಖ್ಯ ಉದ್ದೇಶಗಳು ಆಗಿವೆ.

ರಾಜ್ಯವು ಅನೇಕ ಬಗೆಯ ವನ್ಯ ಪ್ರಾಣಿಗಳಿಗೆ ವರೂರಾಗಿದೆ. ಅರಣ್ಯಕ್ಕೆ ಹೊಂದಿಕೊಂಡ ಗ್ರಾಮಗಳಲ್ಲಿ ವಾಸಿಸುವ ಮತ್ತು ಅರಣ್ಯಗಳ ಅಕ್ಕಪಕ್ಕ ವಾಸಿಸುವ ಜನರಿಗೆ ತಮ್ಮ ಜಾನುವಾರುಗಳಿಗೆ ಉಚಿತ ಮೇವಿಗಾಗಿ ಅರಣ್ಯ ಪ್ರದೇಶ ಮತ್ತು ಉರುವಲುಗಾಗಿ ಒಣಸೌದೆ ಎಲೆಗಳು ಹುಲ್ಲು ಮೊದಲಾದವುಗಳನ್ನು ಕೊಂಡೊಯ್ಯುವ ವಿಶೇಷ ಅಧಿಕಾರವಿರುತ್ತದೆ. ದುರಾದೃಷ್ಟ ವಶಾತ್ ಉರುವಲು ಸೌದೆ ಬೇಡಿಕೆ ಜಾಸ್ತಿಯಾಗಿ ಒಣ ಸೌದೆಯ ಜೊತೆಗೆ ಸಸಿಗಳು ಗಿಡಗಳು ಮತ್ತು ಗೂಟಗಳನ್ನು ಯದ್ವಾ ತದ್ವಾ ಕಿತ್ತು ಮುಂದಿನ ಮರಗಳ ಬೆಳವಣಿಗೆಗೂ ತೊಂದರೆ..

ಯಾಗಿದೆ. ಮುಖ್ಯವಾಗಿ ಅರಣ್ಯ ಪ್ರದೇಶಗಳ ಒಳಗೆ ದನ ಮೇಯಿಸುವ ಅವಕಾಶವು ಅರಣ್ಯಕ್ಕೆ ಬೆಂಕಿ ಬೀಳಲು ಕಾರಣವಾಗಿದೆ. ರೈತರು ತಮ್ಮ ಏಳಿಗೆಗಾಗಿ. ಈ ಅರಣ್ಯಗಳನ್ನೇ ಅವಲಂಬಿಸಿದ್ದಾರೆ. ಅರಣ್ಯಗಳಿಂದ ರಾಜ್ಯಕ್ಕೆ ಚೌಬೀನೆ, ಉರುವಲು ಸರಬರಾಜು ಅರಣ್ಯ ಉತ್ಪನ್ನಗಳ ಮಾರಾಟದಿಂದ ಸಿಗುವ ವಾರ್ಷಿಕ ವರಮಾನ ಜನರಿಗೆ ದೊರಕುವ ಮೇಲ್ಕಂಡ ವಿನಾಯಿತಿಗಳು ಮತ್ತು ವಿಶೇಷ ಅಧಿಕಾರಿಗಳ ಜೊತೆಗೆ ಅರಣ್ಯದಿಂದರಾಜ್ಯಕ್ಕೆ ಮತ್ತು ದೇಶಕ್ಕೆ ಪರೋಕ್ಷವಾಗಿ ಅಸಂಖ್ಯಾತ ಸೌಲಭ್ಯಗಳು ದೊರೆಯುತ್ತದೆ. ರಾಜ್ಯದಲ್ಲಿನ ಅರಣ್ಯ ಜೀವಿಗಳು-ಪರಿಸರ ಸಮತೋಲನವನ್ನು ಮತ್ತು ಪರಿಸರ ರಕ್ಷಣೆಯನ್ನು ಕಾಯ್ದುಕೊಳ್ಳಲು ಸಹಕಾರಿಯಾಗಿದೆ. ಈ ಅರಣ್ಯಗಳು ನದಿಗಳ ಜಲಾನಯನ ಪ್ರದೇಶಗಳನ್ನು ರೂಪಿಸುತ್ತದೆ. ನಮ್ಮ ಬಹುಪಾಲು ಏಳಿಗೆ ಈ ಜಲಾನಯನ ಪ್ರದೇಶವನ್ನು ಅವಲಂಬಿಸಿದೆ. ಈ ಜಲಾನಯನ ಪ್ರದೇಶವು ಮೈದಾನ ಪ್ರದೇಶಗಳಲ್ಲಿ ಆಶ್ರಯವಲಯವಾಗಿಯೂ ಮತ್ತು ವಾಯುತಡೆಗಳಾಗಿಯೂ ಕಾರ್ಯ ನಿರ್ವಹಿಸುತ್ತಿದೆ. ಹೀಗಾಗಿ ವನ್ಯ ಪ್ರದೇಶಗಳಲ್ಲಿ ಉಳಿದಿರುವ ಅರಣ್ಯ ಪ್ರದೇಶಗಳಲ್ಲಿ ಹವಾಮಾನ ಪರಿಸ್ಥಿತಿ ಉತ್ತಮಗೊಳ್ಳುತ್ತದೆ. ತೇವಾಂಶ ಕಳೆದುಕೊಳ್ಳುವುದು ಬಹಳಷ್ಟು ತಪ್ಪುತ್ತದೆ. ಹೀಗಾಗಿ ಕೃಷಿ ಭೂಮಿಯಲ್ಲಿ ಇಳುವರಿಯೂ ಜಾಸ್ತಿಯಾಗುತ್ತದೆ.

4. ನಿರ್ವಹಣೆಯ ಪದ್ಧತಿ:

ರಾಜ್ಯದಲ್ಲಿರುವ ಅರಣ್ಯಗಳನ್ನು ಕಾರ್ಯಯೋಜನೆಗಳ ನಿಯಮಾನುಸಾರವಾಗಿ ನಿರ್ವಹಿಸಲಾಗುತ್ತಿದೆ. ಈ

ಯೋಜನೆಯನ್ನು ಬೆಳೆದಿರುವ ಮರಗಳು ವಿವಿಧ ಅರಣ್ಯೋತ್ಪನ್ನಗಳ ಬೇಡಿಕೆ ಮತ್ತು ಭೂ ತೇವಾಂಶ ಸಂರಕ್ಷಣೆ ಪರಿಸರ ಸಮತೋಲನಕ್ಕೆ ಅಗತ್ಯಾನುಸಾರವಾಗಿ 10 ರಿಂದ 15 ವರ್ಷಗಳ ಅವಧಿಗೆ ರೂಪಿಸಲಾಗಿದೆ. ರಾಜ್ಯದಲ್ಲಿರುವ ಅರಣ್ಯಗಳ ಪೈಕಿ ಸುಮಾರು ಶೇಕಡ 50 ರಷ್ಟು ಅರಣ್ಯಗಳ ದರ್ಜೆ ತಗ್ಗಿಸಲ್ಪಟ್ಟಿದೆ. ಇಂತಹ ಪ್ರದೇಶಗಳಲ್ಲಿ ವನ ನಿರ್ಮಾಣ ಕಾರ್ಯವನ್ನು ಬೃಹತ್ ಪ್ರಮಾಣದಲ್ಲಿ ಕೈ ಕೊಳ್ಳಲಾಗಿದೆ.

5. <u>ಅರಣ್ಯ ಉತ್ಪಾದನೆಯನ್ನು ತೆಗೆಯುವುದು ಮತ್ತು ಮತ್ತು ಅದರ ವಿಲೇವಾರಿ</u>:

ಹಚ್ಚ ಹಸಿರು ಎಲೆಗಳಿಂದ ಕೂಡಿದ ಮರಗಳನ್ನು ಕಡಿಯುವುದನ್ನು ನಿಷೇದಿಸಲಾಗಿದ್ದು, ಬಿದ್ದ ಹಾಗೂ ಒಣಗಿದ ಮರಗಳನ್ನು ಮಾತ್ರ ಕಡಿಯಲು ಅವಕಾಶ ಮಾಡಲಾಗಿದೆ. ಸರ್ಕಾರಿ ಉದ್ಯಮವಾಗಿರುವ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕೆಗಳ ನಿಗಮ ಮರದ ದಿಮ್ಮಿಗಳ ತಯಾರಿ ಕೆಲಸಗಳನ್ನು ಕೈಗೊಳ್ಳಲು ಪ್ರೋತ್ಸಾಹಿತವಾಗಿ ನಿರತವಾಗಿದೆ. ಉತ್ತರ ಕನ್ನಡ ಅರಣ್ಯ ವೃತ್ತದಲ್ಲಿ ಕೆಲವು ಕೂಪುಗಳನ್ನು ಲಾಗಿಂಗ್ ಕೆಲಸಕ್ಕಾಗಿ ಒಪ್ಪಿದ ದರಗಳಲ್ಲಿ ಅರಣ್ಯ ಕಾರ್ಮಿಕರ ಸಹಕಾರ ಸಂಘಗಳವರಿಗೆ ವಹಿಸಲಾಗಿದೆ. ಅರಣ್ಯ ಉತ್ಪನ್ನಗಳು ದೊಡ್ಡ ಮತ್ತು ಸಣ್ಣ ಸಾಮಾಗ್ರಿಗಳ ಪ್ರಮಾಣವನ್ನು ಕೋಷ್ಟಕ 5 ಮತ್ತು 6ರಲ್ಲಿ ಅನುಕ್ರಮವಾಗಿ ನೀಡಲಾಗಿದೆ. ಕೋಷ್ಟಕ 7ರಲ್ಲಿ ನೀಡಿದ ಉರುವಲು ಪ್ರಮಾಣವನ್ನು ಕೋಷ್ಟಕ 8ರಲ್ಲಿ ಒದಗಿಸಿದ ಬೊಂಬುಗಳ ಪ್ರಮಾಣವನ್ನು ಕೊಡಲಾಗಿದೆ.

6. ವಿಲೇಯ ವಿಧಾನ:-

ಚೌಬೀನೆ ಮತ್ತು ಸರ್ಕಾರಿ ಡಿಪೋಗಳ ಅರಣ್ಯ ಉತ್ಪಾದನೆಯನ್ನು ವಿಲೆ ಮಾಡಲು ಈ ಕೆಳಕಂಡ ಮೂರು ವಿಧಾನಗಳಿವೆ.

ಅ) ಹರಾಜು ಮಾರಾಟದ ಮೂಲಕ

ಆ) ಚಿಲ್ಲರೆ ಮಾರಾಟದ ಮೂಲಕ

ಇ) ನಿರ್ದಿಷ್ಟ ದರಗಳಲ್ಲಿ ರೈಲ್ವೆ, ರಕ್ಷಣಾ ಇಲಾಖೆ ಮುಂತಾದವುಗಳಿಂದ ಆಂತ್ಯ ಮೂಲಕ.

ಅ) ಡಿಪೋಗಳಿಂದ ಬಂದ ಚೌಬೀನೆಯನ್ನು ಗುಣ, ದಪ್ಪ, ಮತ್ತು ಉದ್ದಂದಂತೆ ಪ್ರತ್ಯೇಕ ಗುಂಪುಗಳಾಗಿ ವಿಂಗಡಿಸಿದುಂ ಬೇರೆ ಬೇರೆ ಗುಣ ಮಟ್ಟಗಳ ಚೌಬೀನೆಗಳಿಗೆ ಹಿಂದಿನ ದರಗಳನ್ನು ಆದರಿಸಿ ಪ್ರತಿಯೊಂದು ಗುಂಪಿನ ಚೌಬೀನೆಯ ಮೌಲ್ಯಗಳನ್ನು ನಿರ್ಧರಿಸಿ ಅವುಗಳನ್ನು ಸಾರ್ವಜನಿಕರ ಹರಾಜಿಗೆ ಇಡಲಾಗುವುದು. ಸಾಮಾನ್ಯವಾಗಿ ಪ್ರತಿಯೊಂದು ಡಿಪೋವಿನಲ್ಲಿ ಒಂದೊಂದು ವರ್ಷಕ್ಕೆ 3 ರಿಂದ 4 ಬಾರಿ ಮಾರಾಟ ಮಾಡಲಾಗುತ್ತದೆ. ಈ ಮಾರಾಟವನ್ನು ಸಾಮಾನ್ಯವಾಗಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ನಡೆಸುತ್ತಾರೆ.

ಆ) ಚಿಲ್ಲರೆ ಮಾರಾಟದ ಮೂಲಕ

ಸದರಿ ವಿಧಾನದಲ್ಲಿ ಡಿಪೋದಲ್ಲಿ ರಾಶಿ ಹಾಕಿರುವ ಚೌಬೀನೆ ಮತ್ತು ಇತರ ಅರಣ್ಯ ಉತ್ಪನ್ನಗಳನ್ನು ಕಾಲಕಾಲಕ್ಕೆ ಅನುಸಾರಿಯಲ್ಲಿ ನಿರ್ದಿಷ್ಟ ಪಡಿಸಿದ ದರಗಳಲ್ಲಿ ಬಿಡುಗಡೆ ಮಾಡಲಾಗುತ್ತದೆ. ಉಪ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ

ದರಗಳ ಅನುಸೂಚಿಯಲ್ಲಿ ಹೇಳಿರುವಂತೆ ಸಣ್ಣ ಪ್ರಮಾಣದ ಮಾರಾಟಕ್ಕೆ ಮಂಜೂರಾತಿ ನೀಡುವ ಅಧಿಕಾರ ಇದೆ. ಇಲಾಖೆಯಿಂದ ಇಂತಹ ರೀತಿಯಲ್ಲಿ ಬಿಡುಗಡೆ ಮಾಡುವ ಚೌಬೀನೆ ವಾಸ್ತವಿಕ ಉಪಯೋಗಕ್ಕೆ ಮಾತ್ರ ಇರುತ್ತದೆ.

ಇ) <u>ರೈಲ್ವೆ ರಕ್ಷಣಾ ಇಲಾಖೆ ಮೊದಲಾದವುಗಳಿಗೆ.</u>

ಈ ವಿಧಾನದಲ್ಲಿ ಚೌಬೀನೆ ಇತರ ಅರಣ್ಯ ಉತ್ಪನ್ನಗಳನ್ನು ಪರಸ್ಪರ ಒಪ್ಪಂದ ಮಾಡಿಕೊಂಡಿರುವ ದರಗಳಲ್ಲಿ ಡಿಪೋದಿಂದ ರೈಲ್ವೆ ಮತ್ತು ಭಾರತ ಸರ್ಕಾರದ ಇತರ ಸಂಸ್ಥೆಗಳಿಗೆ ಬಿಡುಗಡೆ ಮಾಡಲಾಗುತ್ತದೆ.

6. <u>ಅಭಿವೃದ್ಧಿ ಚಟುವಟಿಕೆಗಳು:</u>

ಅ) ಪೀಠಿಕೆ:- ಕರ್ನಾಟಕ ರಾಜ್ಯದಲ್ಲಿರುವ 1,90,498 ಚ.ಕಿ.ಮೀ. ಭೂ ಪ್ರದೇಶದಲ್ಲಿ 38,723.56 ಚ.ಕಿ.ಮೀ. ನಷ್ಟು ಭೂ ಪ್ರದೇಶವು ಅರಣ್ಯ ಇಲಾಖೆಯ ಸ್ವಾಧೀನದಲ್ಲಿರುತ್ತದೆ. ಶೇಕಡ 20 ರಷ್ಟು ಭೂ ಪ್ರದೇಶವು ಅರಣ್ಯ ಪ್ರದೇಶವೆಂದು ವರ್ಗೀಕರಿಸಿದ್ದರೂ, ಕೇವಲ ಶೇಕಡ 11 ರಷ್ಟು ಮಾತ್ರ ಒಳ್ಳೆಯ ಮರಗಳಿರುವ ಪ್ರದೇಶವಾಗಿರುತ್ತವೆ. ಉಳಿದಿರುವ ಬಹುತೇಕ ಪ್ರದೇಶವು ಬೇರೆ ಬೇರೆ ರೀತಿಯಲ್ಲಿ ಕ್ಷೀಣಿತಗೊಂಡ ಪ್ರದೇಶವಾಗಿರುತ್ತದೆ. ಜನಸಂಖ್ಯೆಯ ಹೆಚ್ಚಳ ಹಾಗೂ ಜಾನುವಾರುಗಳ ಸಂಖ್ಯೆಯ ಹೆಚ್ಚಳದಿಂದಾಗಿ, ರಾಜ್ಯವು ಉರುವಲು ಸೌದೆ, ಮನೆ ಕಟ್ಟುವಂತಹ ಮರ ಹಾಗೂ ದನಗಳ ಮೇವಿನ ಕೊರತೆಯನ್ನು ಎದುರಿಸುತ್ತಿದೆ. ಆದ್ದರಿಂದ ಇಲಾಖೆಯು ಅಭಿವೃದ್ಧಿ ಕಾರ್ಯಕ್ರಮಗಳನ್ನು ಗ್ರಾಮಾಂತರ ಹಾಗೂ ಪಟ್ಟಣ ಪ್ರದೇಶಗಳ ಅವಶ್ಯಕತೆಗಳನ್ನು ಗಮನದಲ್ಲಿಟ್ಟು ಕೊಂಡು ರೂಪಿಸಿರುತ್ತವೆ. 1994-95ನೇ ಸಾಲಿನ ವಾರ್ಷಿಕ

ಯೋಜನೆಗಳಲ್ಲಿ, ಬಂಜರು ಭೂಮಿ ಅಭಿವೃದ್ಧಿ ಕ್ಷೀಣಿತ ಅರಣ್ಯ ಪ್ರದೇಶಾಭಿವೃದ್ಧಿ, ಅರಣ್ಯ ಸಂಶೋಧನೆ ಮತ್ತು ರಾಷ್ಟ್ರೀಯ ಉದ್ಯಾನವನಗಳ ಅರಣ್ಯಗಳ ನಿರ್ವಹಣೆ, ಕೃಷಿ ಪ್ರದೇಶಗಳಲ್ಲಿ ಮರ ಬೆಳೆಸುವುದು ಸೇರಿದಂತೆ ಸಾಮಾಜಿಕ ವನ ನಿರ್ಮಾಣ ಕೈಗೊಳ್ಳುವುದು ಮುಂತಾದ ಕಾರ್ಯಕ್ರಮಗಳಿಗೆ ಹೆಚ್ಚು ಒತ್ತು ಕೊಡಲಾಗಿದೆ. ವಾರ್ಷಿಕವಾಗಿ ರೂ.77.42 ಕೋಟಿ ಗಳನ್ನು ಒದಗಿಸಲಾಗಿದ್ದು (ಇದರಲ್ಲಿ ರಾಜ್ಯದ ಪಾಲು 55.93 ಕೋಟಿ ರೂಗಳು ಮತ್ತು ಕೇಂದ್ರದ ಪಾಲು 21.49 ಕೋಟಿ ರೂಗಳು) ಹೊರಗಡೆಯಿಂದ ಸಾಗರೋತ್ತರ ಅಂದರೆ ವಿದೇಶಿ ನೆರವು 15 ಕೋಟಿ ರೂಗಳನ್ನು ಪಡೆದು ಪಶ್ಚಿಮ ಘಟ್ಟ ಗಳಅರಣ್ಯೀಕರಣ ಮತ್ತು ಪರಿಸರ ಯೋಜನೆಗೆ ನಿಯೋಜಿಸಲಾಗಿದೆ ಮುಖ್ಯ ಯೋಜನೆಗಳ ಸಂಕ್ಷಿಪ್ತ ವಿವರಣೆಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

ಅ) <u>ಕೇಂದ್ರ ಪುರಸ್ಕೃತ ಪ್ರದೇಶಾಧಾರಿತ ಉರುವಲು ಮತ್ತು ಮೇವು ಯೋಜನೆ (50:50) ರಾಜ್ಯ ವಲಯ.</u>

ಉರುವಲು ಮತ್ತು ಜಾನುವಾರುಗಳ ಮೇವಿನ ಕೊರತೆ ಇರುವಂತಹ ಜಿಲ್ಲೆಗಳಾದ ಬೆಂಗಳೂರು, ಚಿಕ್ಕಮಗಳೂರು, ಧಾರವಾಡ, ಗುಲ್ಬರ್ಗಾ, ಕೋಲಾರ, ಚಿತ್ರದುರ್ಗ, ಬೆಳಗಾಂ, ಹಾಸನ, ಮೈಸೂರು ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಈ ಕೊರತೆಯನ್ನು ನೀಗಿಸಲು ನೆಡುತೋಪುಗಳನ್ನು ಬೆಳೆಸಲು ಈ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ. 6874.50 ಹೆಕ್ಟೇರ್ ಪ್ರದೇಶದ ನೆಡುತೋಪುಗಳನ್ನು ಈ ಯೋಜನೆಯಲ್ಲಿ ಬೆಳೆಸಲಾಗಿದ್ದು, 1994-95 ನೇ ಸಾಲಿನಲ್ಲಿ 6660.50 ಹೆಕ್ಟೇರ್ ಪ್ರದೇಶವು ನಿರ್ವಹಣೆ

ಯಲ್ಲಿರುತ್ತದೆ. 400.00 ಲಕ್ಷ ರೂಪಾಯಿಗಳನ್ನು ಪ್ರಸಕ್ತ ವರ್ಷದಲ್ಲಿ ಖರ್ಚುಮಾಡಲು ಒದಗಿಸಲಾಗಿದೆ. ಮಂಡ್ಯ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ನೆಡುತೋಪು ಕಾರ್ಯವನ್ನು ಮಾತ್ರ ತೆಗೆದುಕೊಳ್ಳಲಾಗಿದೆ.

| ವಾಸ್ತವಿಕ ಗುರಿ | | ಒದಗಿಸಿದ ಹಣ | |
|---|---|---|---|
| 1. ನಿರ್ವಹಣೆ | :6660.50 ಹೆ. | ರಾಜ್ಯವಲಯ | :200.00 ಲಕ್ಷ ರೂಗಳು. |
| 2. ನೆಡು ತೋಪು | :6562.00 ಹೆ. | ಕೇಂದ್ರವಲಯ | :200.00 ಲಕ್ಷ ರೂಗಳು. |
| 3. ಮುಂಗಡ ಕೆಲಸ | :2562.00 ಹೆ. | ಒಟ್ಟು | 400.00 ಲಕ್ಷರೂಗಳು |
| 4. ಸಸಿ ಬೆಳೆಸುವುದು: | 25.62 ಲಕ್ಷ | | |

ಇ) ಸಿ.ಎಸ್.ಎಸ್.ಕಿರು ಅರಣ್ಯ ಉತ್ಪನ್ನಗಳಿಗಾಗಿ ನೆಡುತೋಪು ಯೋಜನೆ:

ಶೇಕಡ 100 ರಷ್ಟು ಕೇಂದ್ರದ ಸಹಾಯ ಧನ ಪಡೆದು ಈ ಯೋಜನೆಯನ್ನು ಕಾರ್ಯಗತಗೊಳಿಸಲಾಗುತ್ತಿದೆ. ಸದರಿ ಯೋಜನೆಯಲ್ಲಿ ಔಷಧೋಪಯುಕ್ತ ಸಸ್ಯಗಳ ನೆಡುತೋಪನ್ನು ಬೆಳೆಯಲಾಗುತ್ತಿದೆ. 1994ನೇ ಮಳೆಗಾಲದಲ್ಲಿ 491 ಹೆಕ್ಟೇರ್ ಪ್ರದೇಶದಲ್ಲಿ ಬೆಳೆಸಲಾಗಿದೆ. 1994-95ನೇ ಸಾಲಿನಲ್ಲಿ ರೂ.40 ಲಕ್ಷ ಅನುದಾನವನ್ನು ಈ ಯೋಜನೆಯಲ್ಲಿ ಒದಗಿಸಲಾಗಿದೆ.

ವಾಸ್ತವಿಕ ಗುರಿ

| | |
|---|---|
| ಗಿಡ ನೆಡುವುದು | — 500.00 ಹೆಕ್ಟೇರ್ |
| ಮುಂಗಡ ಕೆಲಸ | — 500 ಹೆಕ್ಟೇರ್ |
| ಒದಗಿಸಿದ ಅನುದಾನ ಮೊತ್ತ | — [illegible] ಲಕ್ಷ ರೂಪಾಯಿಗಳು. |

ಈ) ಸಿ.ಎಸ್.ಎಸ್.ಸಮಗ್ರ ಅರಣ್ಯೀಕರಣ ಮತ್ತು ಪರಿಸರ ಅಭಿವೃದ್ಧಿ ಯೋಜನೆ ಮೆಡ್ಲೇರಿ, ಧಾರವಾಡ ಯೋಜನೆ:

1993–94ನೇ ಸಾಲಿನಿಂದ ಈ ಕೇಂದ್ರ ಪುರಸ್ಕೃತ ಸಮಗ್ರ ಅರಣ್ಯೀಕರಣ ಮತ್ತು ಪರಿಸರ ಅಭಿವೃದ್ಧಿ ಯೋಜನೆಯನ್ನು ಧಾರವಾಡ ಜಿಲ್ಲೆಯ ಮೆಡ್ಲೇರಿ ಜಲಾನಯನ ಪ್ರದೇಶದಲ್ಲಿ ಕಾರ್ಯಗತಗೊಳಿಸಲಾಗುತ್ತಿದೆ. ಒಟ್ಟು ರೂ.362.50 ಲಕ್ಷ ಅಂದಾಜು ಮೊತ್ತದ್ದಿದ್ದು ಈ ಯೋಜನೆಯು ಐದು ವರ್ಷ ಅವಧಿಯಾಗಿರುತ್ತದೆ. ಈ ಯೋಜನೆಯು ಜಲಾನಯನ ಪ್ರದೇಶವನ್ನು, ಅರಣ್ಯೀಕರಣ ಮತ್ತು ಮಣ್ಣು ಸಂರಕ್ಷಣೆ ಕ್ರಮಗಳ ಮುಖಾಂತರ ಸಂಸ್ಕರಿಸುವ ಗುರಿಯನ್ನಿಟ್ಟುಕೊಂಡಿರುತ್ತದೆ. 1994ನೇ ಸಾಲಿನಲ್ಲಿ ಒಟ್ಟು 412 ಹೆಕ್ಟೇರ್ ಪ್ರದೇಶದಲ್ಲಿ ಗಿಡ ನೆಟ್ಟಿರುತ್ತದೆ.

ಭೌತಿಕ ಗುರಿ – 412 ಹೆಕ್ಟೇರ್(ಗಿಡ ನೆಡುವುದು)

ಆರ್ಥಿಕ ಗುರಿ – 102.90 ಲಕ್ಷಗಳು

ಉ) ಕ್ಷೀಣಿತ ಅರಣ್ಯಗಳ ಅಭಿವೃದ್ಧಿ:–

ಈ ಯೋಜನೆಯಲ್ಲಿ ಅರಣ್ಯೀಕರಣದ ಮೂಲಕ ಕ್ಷೀಣಿತ ಅರಣ್ಯ ಪ್ರದೇಶದ ಪುನರುಜ್ಜೀವನಗೊಳಿಸಲು ಉದ್ದೇಶಿಸಲಾಗಿದೆ. ಸದರಿ ಯೋಜನೆಯು 1992–93ನೇ ಸಾಲಿನಿಂದ ಜಾರಿಯಲ್ಲಿದೆ. ಸ್ಥಳದ ಗುಣವನ್ನು ಗಮನದಲ್ಲಿಟ್ಟುಕೊಂಡು ಮತ್ತು ಸ್ಥಳೀಯ ಜನರ ಬೇಡಿಕೆಯನ್ನು ನೋಡಿಕೊಂಡು ಮರ ಮುಟ್ಟುಗಳ ಜಾತಿ, ಉರುವಲು ಮತ್ತು ಮೇವು ಜಾತಿಯ ಗಿಡಗಳನ್ನು ನೆಡಲಾಗುತ್ತಿದೆ.

6178 ಹೆಕ್ಟೇರ್ ಪ್ರದೇಶದ ನೆಡುತೋಪುಗಳನ್ನು ಬೆಳೆಸಲಾಗಿದೆಯಲ್ಲದೆ 3892 ಹೆಕ್ಟೇರ್ ಪ್ರದೇಶವನ್ನು ನಿರ್ವಹಣೆಗೆ ತೆಗೆದುಕೊಳ್ಳಲಾಗಿದೆ. ಈ ಯೋಜನೆಯಲ್ಲಿ 245 ಲಕ್ಷ ರೂ.ಅನುದಾನ ಒದಗಿಸಲಾಗಿದೆ.

ಹಳೆಯ ನೆಡುತೋಪುಗಳ ನಿರ್ವಹಣೆ: 3892.30 ಹೆಕ್ಟೇರ್
ಗಿಡ ನೆಡುವುದು : 5328 ಹೆಕ್ಟೇರ್
ಮುಂಗಡ ಕೆಲಸ : 725 ಹೆಕ್ಟೇರ್
ಸಸಿ ಬೆಳೆಸುವುದು : 7.285 ಲಕ್ಷಗಳಲ್ಲಿ

ಊ) <u>ನಗರ ಪ್ರದೇಶವನ್ನು ಹಸಿರುಗೊಳಿಸುವುದು:</u>

ರಾಜ್ಯದಲ್ಲಿ ಸಾರ್ವಜನಿಕರಿಗೆ ಗಿಡ ನೆಡುವ ಬಗ್ಗೆ ಹೆಚ್ಚಿನ ತಿಳುವಳಿಕೆ ಮೂಡಿರುತ್ತದೆ. ಹೆಚ್ಚು ಹೆಚ್ಚು ಜನರು ತಮ್ಮ ಪ್ರದೇಶದಲ್ಲಿ ಗಿಡಗಳನ್ನು ನೆಡಲು ಮುಂದೆಬರುತ್ತಿದ್ದಾರೆ. ನಗರ ಪಟ್ಟಣ ಪ್ರದೇಶಗಳಲ್ಲಿ ಪರಿಸರವನ್ನು ಸುಧಾರಿಸುವ ಉದ್ದೇಶದೊಂದಿಗೆ, ಸಾಲು ನೆಡುತೋಪುಗಳು, ಮರಗಳನ್ನು ಮತ್ತು ಉದ್ಯಾನವನಗಳನ್ನು ಬೆಳೆಸಲಾಗುತ್ತಿದೆ. 1994—95ನೇ ಸಾಲಿನಲ್ಲಿ ಈ ಕಾರ್ಯಕ್ರಮಕ್ಕಾಗಿ 286 ಲಕ್ಷ ರೂಗಳನ್ನು ಇದಕ್ಕಾಗಿ ಒದಗಿಸಲಾಗಿದೆ. 1526 ಹೆಕ್ಟೇರ್ ಪ್ರದೇಶದ ನೆಡುತೋಪುಗಳನ್ನು ಈ ಯೋಜನೆಯಲ್ಲಿ ಬೆಳೆಸಲಾಗಿದೆ.

<u>ಭೌತಿಕ ಗುರಿ:</u>

ನಿರ್ವಹಣೆ : 1763.50 ಹೆಕ್ಟೇರ್ : ಕಿ.ಮೀ.
ಗಿಡ ನೆಡುವುದು : 1671 ಹೆಕ್ಟೇರ್: ಕಿ.ಮೀ.
ಸಸಿಗಳನ್ನು ಬೆಳೆಸುವುದು: 3.03 ಲಕ್ಷ

ಆರ್ಥಿಕ
ಒದಗಿಸಿದ ಮೊತ್ತ: 286 ಲಕ್ಷ ರೂಗಳು.

ಎ) <u>ರಸ್ತೆ ಬದಿ ನೆಡುತೋಪು ಯೋಜನೆ:</u>

ರಾಜ್ಯದಲ್ಲಿ ಬಹಳಷ್ಟು ರಸ್ತೆಗಳಲ್ಲಿ ಹಸಿರೇ ಇಲ್ಲದ ಕಾರಣ, ರಸ್ತೆಯ ಬದಿಯಲ್ಲಿ ಗಿಡ ನೆಡುವುದರಿಂದಾಗಿ ಪ್ರಯಾಣಿಕರಿಗೆ ನೆರಳು ನೀಡುವ ಮತ್ತು ಸ್ಥಳೀಯ ಜನರಿಗೆ ಹಣ್ಣು ಹಂಪಲು ಒದಗಿಸುವ ಉದ್ದೇಶದಿಂದಾಗಿ ಈ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ಸದರಿ ಯೋಜನೆಗೆ 150.00 ಲಕ್ಷ ರೂಗಳನ್ನು ಒದಗಿಸಿ ಯೋಜನೆಯನ್ನು ಕಾರ್ಯಗತಗೊಳಿಸಲಾಗುತ್ತಿದೆ. 1994-95ನೇ ಸಾಲಿನಲ್ಲಿ 1042 ಕಿ.ಮೀ. ನೆಡುತೋಪುಗಳನ್ನು ಬೆಳೆಸಲಾಗಿದೆ. ಈ ಯೋಜನೆಯ ಕಾರ್ಯಗತಗೊಳಿಸುವುದರಿಂದ ಪರಿಸರ ಸಂರಕ್ಷಣೆ ಮತ್ತು ರಸ್ತೆಯ **ಬೋಳು**ಗಳನ್ನು ಮುಚ್ಚಿ, ಪರಿಸರ ಸೌಂದರ್ಯ ಹೆಚ್ಚಲು ಅನುಕೂಲವಾಗುತ್ತದೆ.

<u>ಭೌತಿಕ ಗುರಿ:</u>

ನಿರ್ವಹಣೆ : 2085.4 ಕಿ.ಮೀ.
ಗಿಡ ನೆಡುವುದು : 947.50 ಹೆ.
ಮುಂಗಡ ಕೆಲಸ : 74.00 ಹೆ.
ಸಸಿಗಳನ್ನು ಬೆಳೆಸುವುದು: 0.315 ಲಕ್ಷ

ಒದಗಿಸಿದ ಮೊತ್ತ— ರೂ.150 ಲಕ್ಷಗಳು.

ಬಿ) <u>ಸಾರ್ವಜನಿಕರ ವಿತರಣೆಗಾಗಿ ಸಸಿಗಳನ್ನು ಬೆಳೆಸುವುದು:</u>

ಖಾಸಗಿ ಜಮೀನುಗಳಲ್ಲಿ ಗಿಡ ನೆಡಲು ಪ್ರೋತ್ಸಾಹಿಸಲು ಸ್ಥಳೀಯ ಜನರ ಬೇಡಿಕೆಗಳ ಅನುಗುಣವಾಗಿ ಸಸಿಗಳನ್ನು ಬೆಳೆಸಲು ಮತ್ತು ಸಾರ್ವಜನಿಕರಿಗೆ ವಿತರಿಸಲು ಈ ಯೋಜನೆಯನ್ನು 193-94ನೇ ಸಾಲಿನಿಂದ ಕಾರ್ಯಗತಗೊಳಿಸ

ಲಾಗುತ್ತಿದೆ. 1994-95ನೇ ಸಾಲಿನಲ್ಲಿ 150 ಲಕ್ಷ ರೂ.ಗಳನ್ನು ಒದಗಿಸಲಾಗಿದೆ. ಈ ಯೋಜನೆಯಿಂದ ಗಿಡಗಳನ್ನು ನೆಡುವ ಮೂಲಕ ಅರಣ್ಯಾಭಿವೃದ್ಧಿಯನ್ನು ಕೈಗೊಳ್ಳಬಹುದಾಗಿದೆ.

| | | |
|---|---|---|
| ಭೌತಿಕ ಗುರಿ | : | 80.71 ಲಕ್ಷ ಸಸಿಗಳು. |
| ಆರ್ಥಿಕ ಗುರಿ | : | 150 ಲಕ್ಷ ರೂ.ಗಳು. |

ಐ) <u>ಅಬೀಜ ಸಂತಾನ ಫಲೋದ್ಯಾನಗಳು ಮತ್ತು ಬೀಜ ಕ್ಷೇತ್ರಗಳು:</u>

ಅರಣ್ಯೀಕರಣ ಕ್ಷೇತ್ರದಲ್ಲಿ ಬೀಜ, ಸಸಿ ಮತ್ತು ಮರಗಳನ್ನು ಸುಧಾರಿಸುವ ಬಗ್ಗೆ ಹೆಚ್ಚಿನ ಅವಕಾಶವಿದ್ದು, ಸುಧಾರಿತ ಬೀಜಗಳನ್ನು ಅಭಿವೃದ್ಧಿ ಪಡಿಸಿ ನೆಡುತೋಪು ಇಳುವರಿಯನ್ನು ಹಲವು ಪಟ್ಟು ಜಾಸ್ತಿ ಮಾಡಲು ಮತ್ತು ಶೀಘ್ರ ಫಲಕೊಡುವ ಅರಣ್ಯ ಗಿಡಗಳನ್ನು ಅಭಿವೃದ್ಧಿ ಪಡಿಸಲು ಈ ಯೋಜನೆಯಲ್ಲಿ ಯೋಜಿಸಲಾಗಿದೆ. ಉತ್ತಮ ಗುಣಮಟ್ಟದ ಬೀಜಗಳು ವ್ಯವಸಾಯ ಕ್ಷೇತ್ರದಲ್ಲಿ ಇಳುವರಿಯಲ್ಲಿ ಅಭೂತ ಪೂರ್ವ ಕ್ರಾಂತಿ ಸಾಧಿಸಿವೆ. ಅದೇ ರೀತಿಯಲ್ಲಿ ಉತ್ತಮ ಗುಣಮಟ್ಟದ ಬೀಜಗಳು ಅರಣ್ಯೀಕರಣದಲ್ಲಿಯೂ ಉತ್ತಮ ಫಲಿತಾಂಶ ತೋರಿಸಿವೆ. ಆದ್ದರಿಂದ ಈ ದಿಶೆಯಲ್ಲಿ ಮೇಲಿನ ಹೊಸ ಯೋಜನೆಯನ್ನು 1993-94 ನೇ ಸಾಲಿನಿಂದ ಕಾರ್ಯಗತಗೊಳಿಸಲಾಗುತ್ತಿದೆ. ಸದರಿ ಯೋಜನೆಯಡಿಯಲ್ಲಿ ಒಳ್ಳೆಯ ಗುಣ ಮಟ್ಟದ ಸಸಿಗಳನ್ನು ಇಲಾಖೆಯ ಉಪಯೋಗಕ್ಕಾಗಿ ಹಾಗೂ ಸಾರ್ವಜನಿಕರಿಗೆ ವಿತರಿಸಲು ಉದ್ದೇಶಿಸಲಾಗಿದೆ. 1994-95 ನೇ ಸಾಲಿನಲ್ಲಿ ಇದಕ್ಕಾಗಿ ಒದಗಿಸಿರುವ ಮೊತ್ತ 40 ಲಕ್ಷ ರೂಪಾಯಿಗಳು.

ಆರ್ಥಿಕ ಗುರಿ :- 40 ಲಕ್ಷ ರೂ.ಗಳು.

೬) <u>ಗ್ರಾಮೀಣ ಅರಣ್ಯ ಸಮಿತಿಗಳು</u>:

ಇತ್ತೀಚಿನ ಸರ್ಕಾರದ ನೀತಿಯಂತೆ ಗ್ರಾಮೀಣ ಅರಣ್ಯ ಸಮಿತಿಗಳ ಮೂಲಕ ಅರಣ್ಯ ಯೋಜನೆಗಳ ಯೋಜನೆ ಮತ್ತು ನಿರ್ವಹಣೆಯ ಚಟುವಟಿಕೆಗಳಲ್ಲಿ ಸ್ಥಳೀಯ ಜನರನ್ನು ತೀವ್ರವಾಗಿ ತೊಡಗಿಸುವುದಾಗಿದೆ. ಅದರಂತೆ ಜಂಟಿ ಅರಣ್ಯ ಯೋಜನೆ ಮತ್ತು ನಿರ್ವಹಣೆ ಯೋಜನೆಯು 1993-94ನೇ ಸಾಲಿನಲ್ಲಿ ಮಂಜೂರಾಗಲ್ಪಟ್ಟಿವೆ. ಈ ಯೋಜನೆಯ ಗುರಿಯು ಗ್ರಾಮೀಣ ಅರಣ್ಯ ಸಮಿತಿಗಳ ಸ್ಥಾಪನೆ, ಫುರಪಟ್ಟ ನೀಡಿಕೆಯು ಜೆ.ಎಫ್.ಪಿ.ಎಂ' ಯೋಜನೆಯ ಒಂದು ಭಾಗವಾಗಿರುತ್ತದೆ. 1994-95ನೇ ಸಾಲಿನಲ್ಲಿ ಈ ಯೋಜನೆಗೆ ಒದಗಿಸಿರುವ ಮೊತ್ತ 30 ಲಕ್ಷ ರೂಪಾಯಿಗಳು.

ಭೌತಿಕ ಪ್ರಗತಿ : ಗ್ರಾಮೀಣ ಅರಣ್ಯ ಸಮಿತಿಗಳ ರಚನೆ.

ಆರ್ಥಿಕ ಗುರಿ : 30 ಲಕ್ಷ ರೂಪಾಯಿಗಳು.

೭) <u>ವಿಶೇಷ ಘಟಕ ಯೋಜನೆ(ರಾಜ್ಯ)</u>:

ಸಾಮಾಜಿಕ ಭದ್ರತಾ ನೆಡುತೋಪುಗಳನ್ನು ಬೆಳೆಸುವುದು, ಬೊಂಬು ಮತ್ತು ಬಿತ್ತ ಸರಬರಾಜು, ಮನೆ ಕಟ್ಟುವ ಸಾಮಾಗ್ರಿಗಳನ್ನು ಒದಗಿಸಿ, ಪರಿಶಿಷ್ಟ ಜಾತಿ ಜನರ ಕಲ್ಯಾಣ ಕಾರ್ಯಗಳನ್ನು ಮಾಡುವುದು ಈ ಯೋಜನೆಯ ಉದ್ದೇಶವಾಗಿದೆ. ಹೊಗೆ ರಹಿತ ಒಲೆಗಳನ್ನು ಸಹ ಈ

ಈ ಯೋಜನೆಯಡಿಯಲ್ಲಿ ಒದಗಿಸಲಾಗುತ್ತಿದೆ. 1994ನೇ ಮಳೆಗಾಲದಲ್ಲಿ 219 ಹೆಕ್ಟೇರ್ ಪ್ರದೇಶದಲ್ಲಿ ಸಾಮಾಜಿಕ ನೆಡುತೋಪುಗಳನ್ನು ಬೆಳಸಿ 6680 ಫಲಾನುಭವಿಗಳಿಗೆ ಪ್ರಯೋಜನವಾಗಿರುತ್ತದೆ.

ಸಾಮಾಜಿಕ ಭದ್ರತಾ ನೆಡುತೋಪು ಬೆಳೆಸುವುದು- 256 ಹೆ.
ನಿರ್ವಹಣೆ : 279 ಹೆಕ್ಟೇರ್
ಗಿಡ ನೆಡುವುದು : 81 ಹೆಕ್ಟೇರ್
ಮುಂಗಡ ಕೆಲಸ: 15 ಹೆಕ್ಟೇರ್
ಹೊಗೆ ರಹಿತ ಒಲೆಗಳ ಸರಬರಾಜು - 4039 ಸಂಖ್ಯೆ
ಬಿತ್ತ ಸರಬರಾಜು - 13580(ಸಂಖ್ಯೆ)
ಬಿದಿರು ಸರಬರಾಜು- 102831(ಸಂಖ್ಯೆ)
ಸಸಿ ಬೆಳೆಸುವುದು - 0.254 ಲಕ್ಷಗಳು
ದೊಡ್ಡ ಫಲಾನುಭವಿಗಳು - 1920
ಚಿಕ್ಕ ಫಲಾನುಭವಿಗಳು - 6018
ಒದಗಿಸಿದ ಮೊತ್ತ ರೂ64 ಲಕ್ಷಗಳು.

ಐ) <u>ನಿಸರ್ಗ ಪ್ರವಾಸೋದ್ಯಮ</u>:

ಕರ್ನಾಟಕ ಅರಣ್ಯಗಳಲ್ಲಿ ಪ್ರವಾಸ ಮಾಡಲು ತುಂಬಾ ಅವಕಾಶವಿರುತ್ತದೆ. ಪ್ರವಾಸಿಗರ ಹೆಚ್ಚಿನ ಆಕರ್ಷಣೆಗೆ ಕೆಲವೊಂದು ಮೂಲಭೂತ ಸೌಕರ್ಯಗಳನ್ನು ಒದಗಿಸಲು ಈ ಒಂದು ಹೊಸ ಯೋಜನೆಯು 1993-94ನೇ ಸಾಲಿನಿಂದ ಕಾರ್ಯಗತಗೊಳ್ಳುತ್ತಿದೆ. 1994-95ನೇ ಸಾಲಿಗೆ ಒದಗಿಸಿದ ಮೊತ್ತ 30 ಲಕ್ಷ ರೂ.ಗಳು.

ಆರ್ಥಿಕ ಗುರಿ : 30 ಲಕ್ಷ ರೂಗಳು.

ಕ) ಉರುವಲು ಮತ್ತು ದನದ ಮೇವಿನ ಯೋಜನೆ:

ಕಳೆದ ಎರಡು ವರ್ಷಗಳಲ್ಲಿ ಉರುವಲು ಮತ್ತು ಮೇವು ಯೋಜನೆಯಡಿಯಲ್ಲಿ ಬೆಳೆಸಿರುವ ನೆಡುತೋಪುಗಳ ನಿರ್ವಹಣೆಯು ರಾಜ್ಯದ 11 ಜಿಲ್ಲೆಗಳಲ್ಲಿ, ಯಾವುವೆಂದರೆ ಬೆಳಗಾಂ, ಬೀದರ್, ಬಿಜಾಪುರ ಚಿತ್ರದುರ್ಗ, ದಕ್ಷಿಣ ಕನ್ನಡ, ಹಾಸನ, ಕೊಡಗು, ರಾಂ[illegible]ು, ಶಿವಮೊಗ್ಗ, ತುಮಕೂರು, ಮತ್ತು [illegible] ಕನ್ನಡಗಳಲ್ಲಿ ಕಾರ್ಯಗತಗೊಳ್ಳುತ್ತಿದೆ. ಈ [illegible]ಜನೆಗೆ ಒದಗಿಸಿರುವ ಮೊತ್ತವು 1994—95ನೇ ಸಾ[illegible] ಲಕ್ಷಗಳನ್ನು ತೆಗೆದಿರಿಸಲಾಗಿದೆ.

ನಿರ್ವಹಣೆ: 1.50 ಹೆಕ್ಟೇರ್

ಆರ್ಥಿಕ ಗುರಿ. [illegible]0 ಲಕ್ಷ ರೂಗಳಲ್ಲಿ.

ಖ) ಕಟ್ಟಡಗಳ ಮೇಲಿನ ಬಂಡವಾಳ(ರಾಜ್ಯ):

ಈ ಯೋಜನೆಯಡಿ ಇಲಾಖಾ ನೌಕರರ ವಸತಿಗಾಗಿ ಹಾಗೂ ಕಛೇರಿಗಳಿಗಾಗಿ ಕಟ್ಟಡಗಳನ್ನು ನಿರ್ಮಾಣ ಮಾಡಲು ಯೋಜಿಸಲಾಗಿದೆ. ಈ ಉದ್ದೇಶಕ್ಕಾಗಿ 1994—95ನೇ ಸಾಲಿಗೆ ಒದಗಿಸಿರುವ ಮೊತ್ತ 130 ಲಕ್ಷ ರೂಪಾಯಿಗಳು. ಇದರಲ್ಲಿ 1993—94ನೇ ಸಾಲಿನಲ್ಲಿ ಪ್ರಾರಂಭಿಸಿ ಅಪೂರ್ಣಗೊಂಡಿರುವ ಕಟ್ಟಡಗಳ ನಿರ್ಮಾಣ ವೆಚ್ಚಕ್ಕೆ ಮತ್ತು 1994—95ನೇ ಸಾಲಿನಲ್ಲಿ 23 ಹೊಸ ಕಟ್ಟಡಗಳ ನಿರ್ಮಾಣಕ್ಕಾಗಿ ಕ್ರಮ ತೆಗೆದುಕೊಳ್ಳಲಾಗಿದೆ.

ವಾಸ್ತವಿಕ ಗುರಿ — 23 ಕಟ್ಟಡಗಳು(1994—95ನೇ ಸಾಲಿಗೆ)

ಆರ್ಥಿಕ ಗುರಿ — 130 ಲಕ್ಷ ರೂಪಾಯಿಗಳು.

ಗ) ಅರಣ್ಯ ಸಂಶೋಧನೆ:

ಮರಗಳ ಸಂರಕ್ಷಣಾ ಕೇಂದ್ರಗಳ ಕೃಷಿ ಅರಣ್ಯ ಸಂಶೋಧನಾ ಕೇಂದ್ರ ಕೆಲವು ಜಾತಿ ಸಸ್ಯಗಳ ಮೇಲೆ ಅವುಗಳ ಉಳಿಯುವಿಕೆಯ ಬಗ್ಗೆ ಒಂದು ಗಿಡದಿಂದ ಇನ್ನೊಂದು ಗಿಡಕ್ಕೆ ಅಂತರ, ಇವುಗಳಿಗೆ ಹಾಕುವಂತಹ ಗೊಬ್ಬರದ ಮೇಲಿನ ಸಂಶೋಧನೆ ಮತ್ತು ಬೀಜ ಅಭಿವೃದ್ಧಿ ಪಡಿಸುವಂತಹ ಮುಖ್ಯ ಉದ್ದೇಶಗಳು ಇದರಲ್ಲಿ ಸೇರಿವೆ.

ಆರ್ಥಿಕವಾಗಿ ಒದಗಿಸಿದ ಮೊತ್ತ 50.00 ಲಕ್ಷ ರೂಪಾಯಿಗಳು.

ಘ) ಬೀಜ ಅಭಿವೃದ್ಧಿ:

ನೆಡುತೋಪುಗಳನ್ನು ಪೂರ್ಣ ಫಲದಾಯಕವಾಗಿ ಬೆಳೆಸಲು ಮುಖ್ಯವಾಗಿ ಬೇಕಾದ ಆವಶ್ಯಕತೆಯು ಪ್ಲಸ್ ಮರಗಳ ಗುರುತಿಸಿದ ಬೀಜ ಕೇಂದ್ರಗಳಿಂದ ಬೀಜ ಮಾಟಿ ವಿಧಿ ವಿಹಿತವಾಗಿ ಶೇಖರಣೆ ಮಾಡುವುದಾಗಿದೆ. ಈ ಯೋಜನೆಯಡಿಯಲ್ಲಿ ಪ್ಲಸ್ ಮರಗಳನ್ನು ಗುರುತಿಸಿ ಬೀಜ ಗೋದಾಮುಗಳನ್ನು ಮಾಡುವುದೇ ಮುಖ್ಯ ಅಂಶ.

ವಾಸ್ತವಿಕ ಗುರಿ : ಬೀಜ ಗೋದಾಮುಗಳನ್ನು ರಚಿಸಿ ಬೀಜ ಹದ ಮಾಡುವುದು. ಮತ್ತು ಪರೀಕ್ಷಿಸುವುದು.

ಆರ್ಥಿಕ ಗುರಿ : 20 ಲಕ್ಷ ರೂಪಾಯಿಗಳು.
(ಒದಗಿಸಿರುವ ಮೊತ್ತ)

1994-95ನೇ ಸಾಲಿನಲ್ಲಿ ಮೂರು ಯೋಜನೆಗಳು

ಅಂದರೆ (1) ಕೃಷಿ ಅರಣ್ಯ ಸಂಶೋಧನೆ (2) ಅರಣ್ಯ ಇಲಾಖೆಯ ಗಣಕೀಕರಣ ಮತ್ತು ಖಾಸಗಿ ಹಿಡುವಳಿಗಳಲ್ಲಿ ಗಿಡ ನೆಡಲು ಬೆಂಬಲ, ಇವುಗಳನ್ನು ಕಾರ್ಯಗತಗೊಳಿಸಲು ಪ್ರಸ್ತಾಪಿಸಲಾಗಿದೆ.

(1) ಕೃಷಿ ಅರಣ್ಯ ಸಂಶೋಧನೆಯಡಿಯಲ್ಲಿ:
ಸಂಶೋಧನೆಗೆ ಚಾಲನೆ ನೀಡಲು ಹಾಗೂ ಕೃಷಿ ಅರಣ್ಯಕ್ಕೆ ಸೂಕ್ತ ಮೇಲ್ಪಂಕ್ತಿಯನ್ನು ಅಭಿವೃದ್ಧಿ ಪಡಿಸುವುದಾಗಿದೆ.

(2) ಅರಣ್ಯ ಇಲಾಖೆ ಗಣಕೀಕರಣ ಯೋಜನೆಯಡಿಯಲ್ಲಿ:
ಸಮರ್ಥ ನಿರ್ವಹಣೆ ಮಾಹಿತಿ ಪದ್ಧತಿಯನ್ನು ಮತ್ತು ಸರಿಯಾದ ತ್ವರಿತ ಲೆಕ್ಕ ಗಣಕೀಕರಣವನ್ನು ಮಾಡಲು ಪ್ರಸ್ತಾಪಿಸಲಾಗಿದೆ.

(3) ಖಾಸಗೀ ಹಿಡುವಳಿಗಳಲ್ಲಿ ಗಿಡ ನೆಡಲು ಬೆಂಬಲ ಯೋಜನೆಯಡಿಯಲ್ಲಿ:-
ಖಾಸಗಿ ಹಿಡುವಳಿಗಳಲ್ಲಿ ಮರ ಬೆಳೆಸುವುದನ್ನು ಜನಪ್ರಿಯಗೊಳಿಸಲು, ಏಳಿಗೆಯಾಗುವಂತೆ ತಮ್ಮದೇ ಆದ ಜಮೀನಿನಲ್ಲಿ ಗಿಡ ನೆಡಲು, ರಕ್ಷಿಸಲು ಮತ್ತು ಮರ ಬೆಳೆಸಲು, ನಗದು ಪ್ರೋತ್ಸಾಹಕದನವನ್ನು ಗರಿಷ್ಠ 300 ಮರಗಳವರೆಗೆ ರೈತರಿಗೆ ಕೊಡಲು ಉದ್ದೇಶಿಸಲಾಗಿದೆ.

ಈ ಕೆಳಕಂಡ ಹೊಸ ಯೋಜನೆಗಳನ್ನು ಮಂಜೂರಾತಿಗಾಗಿ ಸರ್ಕಾರಕ್ಕೆ ಕಳುಹಿಸಲಾಗಿದೆ:-

(1) <u>ಪ್ರವಾಹ ಪೀಡಿತ ಪ್ರದೇಶಗಳಿಗಾಗಿ ಅರಣ್ಯ ಯೋಜನೆ</u>:
ಕರ್ನಾಟಕ ರಾಜ್ಯವು 1992-93ನೇ ಸಾಲಿನಲ್ಲಿ

ಮಹಾಪೂರ (ನೆರೆ) ಹಾವಳಿಯನ್ನು ಅನುಭವಿಸಿದೆ. ರಾಜ್ಯದ ಹೆಚ್ಚಿನ ನದಿಗಳು, ಕಾಡುಗಳು ಜಲಾನಯನ ಪ್ರದೇಶವನ್ನು ಆವರಿಸಿವೆ. ದುರಾದೃಷ್ಟವಶಾತ್ ಜೈವಿಕ ಒತ್ತಡದಿಂದಾಗಿ, ಈ ಪ್ರದೇಶವು, ಕ್ಷೀಣಿತ ಅಥವಾ ನಾನಾ ತರ ಕ್ಷೀಣವಾಗುವ ಹಂತದಲ್ಲಿರುತ್ತದೆ ಮತ್ತು ಇದರಿಂದ ಜೈವಿಕ ಉತ್ಪನ್ನ ಕಡಿಮೆ ಬೀಳುವ ಸಂಭವವಿದ್ದು, ಇದರ ಪರಿಣಾಮ ಜಲಾನಯನ ಪ್ರದೇಶದ ನದಿ ಮತ್ತು ನೀರಿನ ಪ್ರವಾಹದ ಮೇಲೆ ಇರುತ್ತದೆ. ಈ ಒಂದು ಕ್ಷೀಣತೆಯನ್ನು ತಡೆಗಟ್ಟಲು ತೀವ್ರತರ ನಿರ್ವಹಣೆ ಯತ ತಕ್ಷಣ ಆಗತಕ್ಕದ್ದು. ಈ ಸಂಬಂಧದಲ್ಲಿ ಒಂದು ಯೋಜನೆಯು . ಪ್ರಸ್ತಾವನೆಯನ್ನು 5 ವರ್ಷಗಳ ಅವಧಿಗೆ ಅಂದರೆ 1994—95ನೇ ಸಾಲಿನಿಂದ 1998—99ರವರೆಗೆ 400 ಲಕ್ಷ ರೂ.ಗಳಿಗೆ ತಯಾರಿಸಿ ಸರ್ಕಾರಕ್ಕೆ ಕಳುಹಿಸಲಾಗಿದೆ. ಈ ಯೋಜನೆಯು (1) ಅರಣ್ಯ ಸಂರಕ್ಷಣೆ, ಜಲಾನಯನ ಪ್ರದೇಶದಲ್ಲಿ ಗಿಡ ನೆಡುವಿಕೆ, ಕತ್ತಾಳೆ ನೆಡುವಿಕೆ, ತೀರ ಪ್ರದೇಶ ಮತ್ತು ನಾಲಾ ಪ್ರದೇಶಗಳಲ್ಲಿ ಮರ ಬೆಳೆಸಲು ಗುರಿ ಇಟ್ಟುಕೊಳ್ಳಲಾಗಿದೆ.

(2) ಕೇಂದ್ರ ಪುರಸ್ಕೃತ ಯೋಜನೆ ಪರಿಶಿಷ್ಟ ಗುಂಪು ಮತ್ತು ಗ್ರಾಮಾಂತರ ಬಡ ಜನರ ಸಂಘವು ಕ್ಷೀಣಿತ ಅರಣ್ಯಗಳನ್ನು ಪುನರ್ಜೀವನಗೊಳಿಸಿ ಫಲವನ್ನು ಹಂಚಿಕೊಳ್ಳುವ ಆಧಾರ:—

1994—95 ರಿಂದ 1999—2000ನೇ ವರ್ಷದವರೆಗೆ ಅಂದರೆ 6 ವರ್ಷಗಳವರೆಗೆ ಶೇಕಡ 100 ರಷ್ಟು ಕೇಂದ್ರ ಸಹಾಯವನ್ನು ಪಡೆದಿರುವ ಯೋಜನೆಯಾಗಿದ್ದು, 101.68 ಲಕ್ಷ ರೂಗಳನ್ನು ಒದಗಿಸಲು ಪ್ರಸ್ತಾವನೆಯನ್ನು ವಿರಾಜಪೇಟೆ, ಕೊಡಗು, ಜಿಲ್ಲೆಯಲ್ಲಿ ಕಾರ್ಯಗತಗೊಳಿಸಲು

ಉದ್ದೇಶಿಸಿರುತ್ತದೆ.

(3) ಮೇವು ಮತ್ತು ಹುಲ್ಲು ಯೋಜನೆ:

ಮೇವಿನ ಉತ್ಪತ್ತಿಯನ್ನು ಹೆಚ್ಚಿಸಲು ಮತ್ತು ಮೇವಿನ ಸರಬರಾಜನ್ನು ವಿಸ್ತರಿಸಲು, ಮೇವು ನಿಧಿ ಮತ್ತು ಮೇವು ಫಾರಂಗಳ ಸ್ಥಾಪನೆಯನ್ನು ಈ ಯೋಜನೆಯಡಿಯಲ್ಲಿ ಪ್ರಸ್ತಾಪಿಸಲಾಗಿದೆ. 60.27 ಲಕ್ಷ ರೂಪಾಯಿಗಳನ್ನು ಕೇಂದ್ರ ಸಹಾಯದೊಡನೆ ಕೇಂದ್ರ ಪುರಸ್ಕೃತ ಮೇವು ಮತ್ತು ಹುಲ್ಲಿನ ಅಭಿವೃದ್ಧಿ ಯೋಜನೆಯಡಿ ಒದಗಿಸಲು ಪ್ರಸ್ತಾವನೆ ಸಲ್ಲಿಸಲಾಗಿದೆ.

7) ಭೂಮಾಪನಾ ಮತ್ತು ಸೀಮಾ ನಿರ್ಣಯ

ಸಿ ಮತ್ತು ಡಿ ದರ್ಜೆಯ ಭೂಮಿಯನ್ನು ರೆವಿನ್ಯೂ ಇಲಾಖೆಯಿಂದ ಪಡೆಯಲಾಗಿದೆ. ಬಹಳಷ್ಟು ಕಾದಿರಿಸಿದ ಅರಣ್ಯಗಳ ಪ್ರದೇಶವನ್ನು ಅತಿಕ್ರಮಗಳನ್ನು ತಪ್ಪಿಸಲು ಮಾಪನ ಮಾಡಿ ಎಲ್ಲೆಗಳನ್ನು ಗುರ್ತಿಸಲಾಗಿದೆ. ಈ ಯೋಜನೆಯು ರಾಜ್ಯದಲ್ಲಿನ ಅರಣ್ಯ ಕಾರ್ಯ ಯೋಜನೆಗಳನ್ನು ಬೇಕಾದ ಕಡೆಗಳಲ್ಲಿ ಪರಿಷ್ಕರಿಸಲು ಸಹಾಯಕವಾಗಿದೆ.

ವಾಸ್ತವಿಕ ಗುರಿ : 4332 ಕಿ.ಮೀ ಭೂಮಾಪನ (1600 ಕಂಪಾರ್ಟ್‌ಮೆಂಟ್‌ಗಳನ್ನು ಹಾಕುವುದು, 2732 ಕಿ.ಮೀ ಭೂಮಾಪನ ಮತ್ತು ನಿರ್ಣಯ)

ಒದಗಿಸಿದ ಮೊತ್ತ : 50.00 ಲಕ್ಷ ರೂಗಳು(ರಾಜ್ಯ ಘಟಕ)

ಕೆಲಸದ ಬಗ್ಗೆ ಈ ಕೆಳಗೆ ವಿವರಗಳನ್ನು ನೀಡಲಾಗಿದೆ.

| ಕಾಮಗಾರಿ ಯೋಜನೆಗಳು ಚಾಲ್ತಿಯಲ್ಲಿರುವ ವಿಭಾಗದ ಹೆಸರು | ಕಾಮಗಾರಿ ಯೋಜನೆಗಳನ್ನು ಬರೆದು ಮುಗಿಸಿರುವ ಗೊತ್ತಿಸಿದ ಮೇಲೆ ಸರ್ಕಾರದ ಮಂಜೂರಾತಿಗಾಗಿ ರವಾನಿಸಿರುವ ವಿಭಾಗಗಳು. | ಬೇರೆ ಬೇರೆ ಹಂತದಲ್ಲಿರುವ ಕಾಮಗಾರಿ ಯೋಜನೆಗಳ ವಿಭಾಗಗಳು. | ಕಾಮಗಾರಿ ಯೋಜನೆಗಳನ್ನು ತಯಾರಿಸಬೇಕಾಗಿರುವ ವಿಭಾಗಗಳು |
|---|---|---|---|
| 1 | 2 | 3 | 4 |
| 1) ಬೆಂಗಳೂರು | — | 1) ಕೋಲಾರ ವಿಭಾಗ | 1) ಕಾರವಾರ ವಿಭಾಗ |
| 2) ಗದಗ | — | 2) ಗೋಕಾಕ್ ವಿಭಾಗ | 2) ಸಿರ್ಸಿ ವಿಭಾಗ ಮತ್ತು ಸಿದ್ದಾಪುರ |
| 3) ಬಳ್ಳಾರಿ | — | — | 3) ಬೆಳಗಾವಿ ವಿಭಾಗ |
| 4) ಚಿತ್ರದುರ್ಗ | — | 3) ಮಂಗಳೂರು ವಿಭಾಗ | 4) ಬಾಗಲಕೋಟೆ |
| 5) ಹಾಸನ | — | 4) ಹಳಿಯಾಳ ವಿಭಾಗ | .... |

| 1 | 2 | 3 | 4 |
|---|---|---|---|
| 6) [illegible] | --- | | |
| 7) ಹುಣಸೂರು | — | 5) ಭದ್ರಾವತಿ ವಿಭಾಗ | |
| 8) ಧಾರವಾಡ | — | 6) ಚಿಕ್ಕಮಗಳೂರು ವಿಭಾಗ | |
| 9) ಮೈಸೂರು | — | 7) ಶಿವಮೊಗ್ಗ ವಿಭಾಗ | |
| 10) ಚಾಮರಾಜನಗರ | — | 8) ಬೀದರ್ ವಿಭಾಗ | |
| 11) ಕೊಳ್ಳೇಗಾಲ | — | 9) ಕಲಬುರ್ಗಿ ವಿಭಾಗ | |
| 12) ಮಂಡ್ಯ | — | 10) ಘಟಪ್ರಭ | |
| 13) ಮಡಿಕೇರಿ | — | 11) ಕುಂದಾಪುರ | |
| 14) ರಾಯಚೂರು | — | | |
| 15) ಕೊಪ್ಪ | — | 12) ಸಾಗರ | |
| 16) ಮುಂಡಗೋಡು ತೇಗದ ಕಂಬ (ಯಲ್ಲಾಪುರ) | — | | |
| 17) ಯಲ್ಲಾಪುರ ಮಂಚಿಕೆರೆ ಅರಣ್ಯ ಕ್ಷೇತ್ರ | — | | |

| 1 | 2 | 3 | 4 |
| --- | --- | --- | --- |
| 18) ಹಳಿಯಾಳ ತೇಗದ ಕಂಬದ ಅರಣಿ (ಹಳಿಯಾಳ ವಿಭಾಗ | — | | |
| 19) ಗುಂಡ್ ಕ್ಷೇತ್ರ (ಹಳಿಯಾಳ ವಿಭಾಗ) | — | | |
| 20) ಕಾರವಾರ ವಿಭಾಗ | — | | |
| 21) ಬೊನಾಸ್ತವರ | — | | |
| 22) ಂತುಲ್ಲಾಪುರ ಎತ್ತರದ ಅರಣಿ ಕ್ಷೇತ್ರ | — | | |

ರಾಜ್ಯ ಅರಣ್ಯ ವಲಯಗಳ ಭೂಮಾಪನ ಜೊತೆ 'ಸಿ' ಮತ್ತು 'ಡಿ' ಜಮೀನುಗಳ ಸೀಮಾ ನಿರ್ಣಯ ಮಾಡುವ ಕಾರ್ಯವನ್ನು ಈ ವರ್ಷವೂ ಮುಂದುವರಿಸಲಾಯಿತು.

ಈ ಕೆಲಸಕ್ಕೋಸ್ಕರ ಹೆಚ್ಚುವರಿ 5 ಉಪ ಅರಣ್ಯ ಸಂರಕ್ಷಣಾಧಿಕಾರಿಗಳನ್ನು ನಿಯೋಜಿಸಲಾಗಿದೆ. ಇವರ ಸಹಾಯಕ್ಕಾಗಿ 58 ವಲಯ ಅರಣ್ಯ ಅಧಿಕಾರಿಗಳನ್ನು ಕೊಡಲಾಗಿದೆ.

ಈ ವರ್ಷದಲ್ಲಿ ನಕ್ಷೆಗಳ ಸೀಮಾ ಗುರುತು ಮಾಡಲು ಸರ್ವೆ ಮಾಡಿ, 1634 ಕಿ.ಮೀ ಉದ್ದದ ಬೇಲಿಯನ್ನು ಹಾಕಿ ರಕ್ಷಿತ ಹಾಗು ಗುರ್ತಿನ ಕಲ್ಲುಗಳನ್ನು ನೆಡಲು ರೂ.39 ಲಕ್ಷ ಒದಗಿಸಿದ್ದು ಅದರಲ್ಲಿ ರೂ.27.25 ಲಕ್ಷ ಖರ್ಚು ಮಾಡಲಾಗಿದೆ. ಅರಣ್ಯ ಸಂಪನ್ಮೂಲಗಳ 1225 ಮಾದರಿ ಪ್ಲಾಟ್ಸ್ ಸಮೀಕ್ಷೆ ಮಾಡಲಾಗಿದೆ. ಇದಲ್ಲದೆ 35000 ಹೆಕ್ಟೇರ್ ಕೆಲಸವನ್ನು ಕೂಡ ತೆಗೆದು ಕೊಳ್ಳಲಾಗಿದೆ.

8)

## ಅರಣ್ಯ ರಕ್ಷಣೆ

ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆ ಮತ್ತು ಅರಣ್ಯ ಸಿಬ್ಬಂದಿಯ ಮೇಲಿನ ಹಲ್ಲೆಯಂತಹ ತೊಡಕುಗಳನ್ನು ತಡೆಯಲು ಈ ಯೋಜನೆಯನ್ನು ಸಿದ್ಧಪಡಿಸಲಾಗಿದೆ.

ಈ ಯೋಜನೆಯಡಿ ಅವಶ್ಯಕವಾದ ವಾಹನ, ಅಂಯುಧ ಉಪಕರಣಗಳು, ಸಂಚಾರಿ ಘಟಕ, ಕಟ್ಟಡ ಮತ್ತು ಇತರೆ ಅನುಕೂಲತೆಯನ್ನು ಸಿಬ್ಬಂದಿಗೆ ಒದಗಿಸಿ ಅರಣ್ಯಗಳನ್ನು ಸಂರಕ್ಷಿಸಲು ಒತ್ತು ಕೊಡಲಾಗಿದೆ.

ಭೌತಿಕ ಗುರಿ : 9,000 ಕಿಲೋ ಮೀಟರ್ ಅರಣ್ಯ ಪ್ರದೇಶದಲ್ಲಿ ಬೆಂಕಿ ರಕ್ಷಣೆ ಕೆಲಸನಿರ್ವಹಣೆ ಅರಣ್ಯ ಸಂಚಾರಿ ದಳಗಳಿಗಾಗಿ ಹೊಸ ಜೀಪುಗಳನ್ನು ಕೊಳ್ಳುವುದು ಮತ್ತು ವಾಹನಗಳ ನಿರ್ವಹಣೆ, ವೈರ್‌ಲೆಸ್ ಸೆಟ್‌ಗಳನಿರ್ವಹಣೆ, ಇತ್ಯಾದಿ.

ಆರ್ಥಿಕ ಗುರಿ : 120.00 ಲಕ್ಷ ರೂ.ಗಳು.

) ಅರಣ್ಯ ಅಭಿವೃದ್ಧಿ ನಿಧಿ:

ಅರಣ್ಯ ಇಲಾಖೆಯಲ್ಲಿ ಅನುಷ್ಠಾನದಲ್ಲಿರುವ ಇತರ ಯೋಜನೆಗಳ ಜೊತೆಗೆ ಅರಣ್ಯ ಅಭಿವೃದ್ಧಿ ನಿಧಿಯನ್ನು ರಣ್ಯ ಉತ್ಪನ್ನಗಳ ಮೇಲೆ ಕರವನ್ನು ವಿಧಿಸಿಕೊಡಿಸಲಾಗುತ್ತಿದೆ. ರಣ್ಯ ಉತ್ಪನ್ನಗಳನ್ನು ಇತರರಿಗೆ ನೀಡುವಾಗ ಶೇಕಡ 8 ರಂತೆ ಾಗೂ ಅರಣ್ಯ ಕೈಗಾರಿಕೆಗಳಿಗೆ ಕಚ್ಚಾವಸ್ತುಗಳನ್ನು ಬರಾಜು ಮಾಡುವಾಗ ಶೇಕಡ 12 ರಂತೆ ಕರವನ್ನು ವಿಧಿಸಿ ುದ ಮೊತ್ತದಿಂದ ನೆಡುತೋಪುಗಳನ್ನು ಬೆಳೆಸಲು ಯೋಗಿಸಲಾಗುತ್ತಿದೆ. ಅರಣ್ಯ ಅಭಿವೃದ್ಧಿ ನಿಧಿಯಲ್ಲಿ ಕೆಳಗೆ ತೋರಿಸಿರುವಂತಹ ನೆಡುತೋಪುಗಳನ್ನು ಸಲಾಗುತ್ತಿದೆ.

ತೇಗದ ಮರದ ನೆಡುತೋಪುಗಳು

2) ಬೆಂಕಿ ಕಡಿತ ಮರದ ನೆಡುತೋಪುಗಳು

3) ನಿತ್ಯಹರಿದ್ವರ್ಣ ಹಾಗೂ ಅರೆ ನಿತ್ಯ ಹರಿದ್ವರ್ಣ ಪ್ರದೇಶದಲ್ಲಿ ಮರಗಳನ್ನು ಬೀಳಿಸಿಂತಾದ ಮೇಲೆ ಖಾಲಿ ಇರುವ ಜಾಗದಲ್ಲಿ ನೆಡುತೋಪುಗಳನಿರ್ಮಾಣ.

4) ಅತಿ ಬೇಗ ಬೆಳೆಯುವ ಮತ್ತಿ, ಇತರ ಜಾತಿ ನೆಡುತೋಪುಗಳು.

5) ಶಾಲಾವನ.

10) ರಾಷ್ಟ್ರೀಯ ಉದ್ಯಾನವನಗಳನ್ನು ಹಾಗು ಅಭಯಾರಣ್ಯಗಳನ್ನು ಅಭಿವೃದ್ಧಿ ಪಡಿಸಲು ಕೇಂದ್ರ ಪುರಸ್ಕೃತ ಯೋಜನೆ

ಕೇಂದ್ರ ಪುರಸ್ಕೃತ ಯೋಜನೆಯಡಿಯಲ್ಲಿ ರಾಜ್ಯ ಸರ್ಕಾರದ ಧನಸಹಾಯದೊಡನೆ ರಾಜ್ಯದಲ್ಲಿ 5 ರಾಷ್ಟ್ರೀಯ ಉದ್ಯಾನವನಗಳು ಮತ್ತು 10 ಅಭಯಾರಣ್ಯಗಳನ್ನು ಅಭಿವೃದ್ಧಿ ಪಡಿಸಲಾಗುತ್ತಿದೆ.

ಭೌತಿಕ ಗುರಿ

ವನ್ಯಪ್ರಾಣಿಗಳ ಅವಸಾಧನಗಳ . ಅಭಿವೃದ್ಧಿ, ರಕ್ಷಣೆ, ಬೆಂಕಿ ರಕ್ಷಣೆ ಇತ್ಯಾದಿ ಕೆಲಸಗಳು.

1994-95ನೇ ಸಾಲಿನ ಅನುದಾನದ ವಿವರ:

| | |
|---|---|
| 1) ರಾಜ್ಯದ ಪಾಲು | 176.00 ಲಕ್ಷ |
| 2) ಕೇಂದ್ರ ಸಹಾಯ | 146.46 ಲಕ್ಷ |
| ಒಟ್ಟು | 322.46 ಲಕ್ಷ |

ಮುಂದುವರೆದು ರಾಜ್ಯ ಯೋಜನೆಯಡಿಯಲ್ಲಿ ಕರ್ನಾಟಕ ಸರ್ಕಾರವು 1994—95ನೇ ಸಾಲಿನಲ್ಲಿ ರೂ.104 ಲಕ್ಷ ಬಿಡುಗಡೆ ಮಾಡಿದ್ದು ಅದನ್ನು ಇತರೆ ಅಭಯಾರಣ್ಯಗಳ ಅಭಿವೃದ್ಧಿಗೆ ಬಳಸಲಾಗುತ್ತಿದೆ.

**ಶೇಕಡಾ ನೂರು ಕೇಂದ್ರ ಪುರಸ್ಕೃತ ಯೋಜನೆ:**

1994—95ನೇ ಸಾಲಿಗೆ ಈ ಕೆಳಗೆ ಯೋಜನೆಯಡಿಯಲ್ಲಿ ಹಣ ಬಿಡುಗಡೆಯಾಗಿರುವುದಿಲ್ಲ.(ಡಿಸೆಂಬರ್ 1994ರವರೆಗೆ)

1) ನೀಲಗಿರಿ ಜೀವಗೋಳ (ನೀಲಗಿರಿ ಬಯೋಸ್ಫಿಯರ್ ರಿಸರ್ವ್)
2) ಆನೆ ಯೋಜನೆ
3) ಪರಿಸರ ಅಭಿವೃದ್ಧಿ ಯೋಜನೆ.

## ವನ್ಯ ಪ್ರಾಣಿಗಳ ಸಂರಕ್ಷಣೆ

ಐದು (5) ರಾಷ್ಟ್ರೀಯ ಉದ್ಯಾನವನಗಳು ಹಾಗು 21(ಇಪ್ಪತ್ತೊಂದು) ಅಭಯಾರಣ್ಯಗಳು ಸೇರಿ ರಾಜ್ಯದ 6360.38 ಚದರ ಕಿಲೋಮೀಟರ್ ಅರಣ್ಯ ಪ್ರದೇಶವನ್ನು ಆಕ್ರಮಿಸಿದೆ.

ಈ ಕೆಳಗೆ ತೋರಿಸಿರುವಂತೆ ವನ್ಯಪ್ರಾಣಿ ವಿಭಾಗಗಳು ಹಾಗು ಅವುಗಳ ಅಧೀನದಲ್ಲಿನ ರಾಷ್ಟ್ರೀಯ ಉದ್ಯಾನವನಗಳು ಅಭಯಾರಣ್ಯಗಳು ಇವೆ.

| ವೃತ್ತದ ಹೆಸರು | ವಿಭಾಗದ ಹೆಸರು | ರಾಷ್ಟ್ರೀಯ ಉದ್ಯಾನವನ ಅಭಯಾರಣ್ಯದ ಹೆಸರು | ವಿಸ್ತೀರ್ಣ ಚ.ಕಿ.ಮಿ. |
|---|---|---|---|
| 1) ಕ್ಷೇತ್ರ ನಿರ್ದೇಶಕರು ಮತ್ತು ಅರಣ್ಯ ಸಂರಕ್ಷಣಾಧಿಕಾರಿಗಳು ವನ್ಯಜೀವಿ ದಕ್ಷಿಣ ವೃತ್ತ, ಮೈಸೂರು | ಉಪ ನಿರ್ದೇಶಕರು ಹುಲಿಯೋಜನೆ ವಿಭಾಗ, ಗುಂಡ್ಲುಪೇಟೆ. | 1) ಬಂಡೀಪುರ ರಾ.ಉದ್ಯಾನವನ ಹುಲಿಯೋಜನೆ ವಿಭಾಗ, ಗುಂಡ್ಲುಪೇಟೆ. | 874.20 |
| | ಚಾಮರಾಜನಗರ ವನ್ಯಜೀವಿ ವಿಭಾಗ | ಬಿಳಿಗಿರಿರಂಗನಬೆಟ್ಟ ಅಭಯಾರಣ್ಯ | 539.52 |
| | ಹುಣಸೂರು ವನ್ಯಜೀವಿ ವಿಭಾಗ | ನಾಗರಹೊಳೆ ರಾ.ಉದ್ಯಾನವನ | 643.39 |

| 1 | 2 | 3 | 4 |
|---|---|---|---|
| 2)ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ಉತ್ತರ ವೃತ್ತ, ಶಿವಮೊಗ್ಗ. | ಶಿವಮೊಗ್ಗ ವಜೀ ವಿಭಾಗ | 1)ಶೆಟ್ಟಿಹಳ್ಳಿ ಅಭಯಾರಣ್ಯ | 395.60 |
| | | 2)ಶರಾವತಿ | 431.23 |
| | | 3)ಗುಡವಿ ಪಕ್ಷಿಧಾಮ | 0.73 |
| | ಉ.ಅ.ಸಂ.ಭದ್ರಾ ಅಭಯಾರಣ್ಯ, ಚಿಕ್ಕಮಗಳೂರು | 1)ಭದ್ರಾ ಅಭಯಾರಣ್ಯ | 492.46 |
| | ಉ.ಅ.ಸಂ. ಕುದುರೆಮುಖ ವಜೀ ವಿಭಾಗ, ಕಾರ್ಕಳ | 1)ಕುದುರೆಮುಖ ರಾ. ಉದ್ಯಾನವನ | 600.32 |
| | | 2)ಸೋಮೇಶ್ವರ ಅಭಯಾರಣ್ಯ | 88.40 |
| | | 3)ಮೂಕಾಂಬಿಕ ಅಭಯಾರಣ್ಯ | 247.00 |
| | ಉ.ಅ.ಸಂ. ದಾಂಡೇಲಿ ವಜೀ. ದಾಂಡೇಲಿ | 1)ದಾಂಡೇಲಿ ಅಭಯಾರಣ್ಯ | 475.02 |
| | | 2)ಅಣಶಿ ರಾ. ಉದ್ಯಾನವನ | 250.00 |

| 1 | 2 | 3 | 4 |
|---|---|---|---|
| 3)ಅಧಿಕ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ನಾ.ಅ.) ಬೆಂಗಳೂರು. | ಉ.ಅ.ಸಂ. ಕಾವೇರಿ ವನ್ಯಜೀವಿ ವಿಭಾಗ, ಕನಕಪುರ | 1)ಕಾವೇರಿ ಅಭಯಾರಣ್ಯ | 526.96 |
| | ಸ.ಅ.ಸ.ಬನ್ನೇರುಘಟ್ಟ ರಾ.ಉದ್ಯಾನವನ | 2)ಬನ್ನೇರುಘಟ್ಟ ರಾ. ಉದ್ಯಾನವನ | 104.27 |
| | ಸ.ಅ.ಸಂ. ವನ್ಯಜೀವಿ ಉಪ ವಿಭಾಗ ಮಡಿಕೇರಿ. | 1)ಪುಷ್ಪಗಿರಿ | 102.96 |
| | | 2)ತಲಕಾವೇರಿ | 105.00 |
| | ಸ.ಅ.ಸಂ.ವಜೀ ಉಪ ವಿಭಾಗ, ಮೈಸೂರು | 1)ನುಗು ಅಭಯಾರಣ್ಯ | 30.32 |
| | | 2)ಆದಿಚುಂಚನಗಿರಿ ನವಿಲುಧಾಮ | 0.84 |
| | | 3)ರಂಗನತಿಟ್ಟು ಪಕ್ಷಿಧಾಮ | 0.67 |
| | | 4)ಅರಬಿತಿಟ್ಟು ಅಭಯಾರಣ್ಯ | 13.50 |
| | | 5)ಮೇಲುಕೋಟೆ ಅಭಯಾರಣ್ಯ | 49.82 |
| | | 6)ಬ್ರಹ್ಮಗಿರಿ ಅಭಯಾರಣ್ಯ | 181.29 |

| 1 | 2 | 3 | 4 |
|---|---|---|---|
| | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ವಜೀ. ಧಾರವಾಡ | 1) ರಾಣಿಬೆನ್ನೂರು ಕೃಷ್ಣಮೃಗ ಅಭಯಾರಣ್ಯ | 119.00 |
| | | 2) ಘಟಪ್ರಭಾ ಪಕ್ಷಿಧಾಮ | 29.78 |
| 5) ಕೆನರಾ ವೃತ್ತ, ಸಿರ್ಸಿ. | ಉ.ಅ.ಸಂ. ಯಲ್ಲಾಪುರ ವಿಭಾಗ, ಯಲ್ಲಾಪುರ. | 1) ಅತ್ತಿವೇರಿ ಪಕ್ಷಿಧಾಮ | 2.23 |
| ಬಳ್ಳಾರಿ ವೃತ್ತ, ಬಳ್ಳಾರಿ | ಉ.ಅ.ಸಂ. ಬಳ್ಳಾರಿ | 2) ದರೋಜಿ ಕರಡಿಧಾಮ | 55.87 |
| | | ಒಟ್ಟು | 6360.38 |

ಹಿಂದಿನ ವರ್ಷಗಳಲ್ಲಿದ್ದಂತೆ ರಾಷ್ಟ್ರೀಯ ಉದ್ಯಾನವನ ಮತ್ತು ಅಭಯಾರಣ್ಯಗಳನ್ನು ಪ್ರಸ್ತುತ ಸಾಲಿನಲ್ಲಿ ನಿರ್ವಹಣೆ ಮಾಡಲಾಗಿದೆ. ಇವುಗಳ ಜೊತೆಗೆ ಪಟ್ಟಣ ಮತ್ತು ನಗರಗಳಲ್ಲಿರುವ ಮೃಗಾಲಯಗಳನ್ನು ಸಹ ನಿರ್ವಹಿಸಲಾಗುತ್ತಿದೆ.

1994–95ನೇ ಸಾಲಿನಲ್ಲಿ ರಾಜ್ಯ ಘಟಕ ಯೋಜನೆಯು 64.00 ಲಕ್ಷ ರೂಪಾಯಿಗಳನ್ನು ನಿಸರ್ಗ ಸಂರಕ್ಷಣೆಯಡಿ ಒದಗಿಸಿದೆ. ಇದರ ಜೊತೆಗೆ ಕೇಂದ್ರ ಪುರಸ್ಕೃತ ಯೋಜನೆಯಡಿ ಕೇಂದ್ರ ಸಹಾಯವಾದ 40.00 ಲಕ್ಷ ರೂಪಾಯಿಗಳನ್ನು ಒದಗಿಸಿ ರಾಷ್ಟ್ರೀಯ ಉದ್ಯಾನವನ ಮತ್ತು ಅಭಯಾರಣ್ಯ ಹಾಗು ನಾಗರಹೊಳೆ ರಾಷ್ಟ್ರೀಯ ಉದ್ಯಾನವನಗಳನ್ನು ಅಭಿವೃದ್ಧಿಪಡಿಸಲಾಗುತ್ತಿದೆ. 1994–95ನೇ ಸಾಲಿನಲ್ಲಿ 333.35 ಲಕ್ಷ ರೂಪಾಯಿಗಳನ್ನು ಒದಗಿಸಿದ್ದು ಅದರಲ್ಲಿ 163.42 ಖರ್ಚು ಮಾಡಿ ರಾಷ್ಟ್ರೀಯ ಉದ್ಯಾನವನ ಮತ್ತು ಅಭಯಾರಣ್ಯಗಳನ್ನು ಅಭಿವೃದ್ಧಿಪಡಿಸಲಾಗುತ್ತಿದೆ.

ಈ) <u>ಹುಲಿ ಯೋಜನೆ:</u>

ಕೇಂದ್ರ ಪುರಸ್ಕೃತ ಯೋಜನೆಯಡಿ ಬಂಡೀಪುರ ಹುಲಿ ಯೋಜನೆಗಾಗಿ ಕೇಂದ್ರ ಸರ್ಕಾರದ ಸಹಾಯ ಧನದಿಂದ ಮುಂದುವರೆಸಿದೆ. ಇದರಲ್ಲಿ 72.75 ಲಕ್ಷ ರೂಪಾಯಿಗಳನ್ನು ಒದಗಿಸಿ 52.59 ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳನ್ನು ಮಾಡಲಾಗಿದೆ.

ವನ್ಯಪ್ರಾಣಿಗಳ ಗಣತಿಯನ್ನು ಮಾಡಿ ಈ ಕೆಳಗೆ ತೋರಿಸಿರುವಂತೆ ಸಂಖ್ಯಾಬಲವಿರುತ್ತದೆ.

1993ರ ಆನೆಗಳ ಗಣತಿ ಕರ್ನಾಟಕ (ಅ)

| ಕ್ರಮ ಸಂಖ್ಯೆ | ರಾಷ್ಟ್ರೀಯ ಉದ್ಯಾನವನಗಳು: ಅಭಯಾರಣ್ಯಗಳು | ಅಡಲ್ಟ್ | | | ಸಬ್ ಅಡಲ್ಟ್ | | | ಜುವೆನೈಲ್ | ಕಾಫ್ | ಒಟ್ಟು |
|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಮಕಾನ | ಗಂಡು | ಹೆಣ್ಣು | ಮಕಾನ | | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1) | ಕೊಳ್ಳೇಗಾಲ ವಿಭಾಗ | 22 | 286 | — | — | 76 | — | — | — | 384 |
| 2) | ಕಾವೇರಿ ವನ್ಯಜೀವಿ ವಿಭಾಗ | 51 | 312 | — | 07 | 114 | — | — | 184 | 668 |
| 3) | ಬಿ.ಆರ್.ಟಿ. ವನ್ಯಜೀವಿ ಅಭಯಾರಣ್ಯ | 218 | 464 | — | — | — | — | 65 | 167 | 914 |
| 4) | ನಾಗರಹೊಳೆ ರಾಷ್ಟ್ರೀಯ ಉದ್ಯಾನವನ | 310 | 617 | — | 58 | 111 | — | 202 | 120 | 1448 |
| 5) | [illegible]ಗು ವನ್ಯಜೀವಿ ಅಭಯಾರಣ್ಯ | 4 | — | — | 02 | 007 | — | — | 003 | 0016 |

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| 6) | ಬಂಡೀಪುರ ಹುಲಿ ಕ್ಷೇತ್ರ | 358 | 973 | — | 80 | 101 | — | 168 | 259 | 1939 |
| 7) | ಮಂಡ್ಯ ವಿಭಾಗ | 004 | 011 | — | 02 | 03 | — | — | 003 | 0023 |
| 8) | ಮಡಿಕೇರಿ ವಿಭಾಗ | 026 | 030 | — | 22 | 32 | — | 001 | 017 | 0128 |
| 9) | ವಿರಾಜಪೇಟೆ ವಿಭಾಗ | 035 | 044 | — | 05 | 06 | — | 005 | 011 | 0106 |
| 10) | ಮೈಸೂರು ವೆಸ್ಟ್ ವಿಭಾಗ | 014 | 015 | — | 09 | 06 | — | 010 | 001 | 0055 |
| 11) | ಹಾಸನ ವಿಭಾಗ | 010 | 005 | 01 | — | — | — | — | 002 | 0018 |
| 12) | ತಿರಾಪ್ಪ ವಿಭಾಗ | 005 | 003 | — | — | — | — | — | 001 | 0009 |
| 13) | ದಾಂಡೇಲಿ ವನ್ಯಜೀವಿ ವಿಭಾಗ | 011 | 010 | — | 07 | 02 | — | 04 | 003 | 0037 |

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| 14) | ಹಿಂತರಾಳ ವಿಭಾಗ | 010 | 005 | 01 | – | – | – | – | 002 | 0018 |
| 15) | ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ | 009 | 018 | – | 05 | 14 | – | 03 | 007 | 0056 |
| 16) | ಭದ್ರಾ ವನ್ಯಜೀವಿ ಅಭಯಾರಣ್ಯ | 023 | 093 | – | 01 | 21 | – | 13 | 010 | 0161 |
| | ಒಟ್ಟು | 1110 | 2916 | 02 | 198 | 493 | – | 471 | 790 | 5980 |

## ಕರ್ನಾಟಕ ಅರಣ್ಯ ಇಲಾಖೆ

| ಕ್ರಮ ಸಂಖ್ಯೆ | ರಾಷ್ಟ್ರೀಯ ಉದ್ಯಾನವನ: ಅಭಯಾರಣ್ಯ: ವಿಭಾಗ | ಹುಲಿ | | | | | ಚಿರತೆ | | | | |
|---|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಮರಿ | ಲಿಂಗ ಗೊತ್ತಿಲ್ಲದಿರುವುದು | ಒಟ್ಟು | ಗಂಡು | ಹೆಣ್ಣು | ಮರಿ | ಲಿಂಗ ಗೊತ್ತಿಲ್ಲದಿರುವುದು | ಒಟ್ಟು |
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| 1) | ಬಂಡೀಪುರ ರಾಷ್ಟ್ರೀಯ ಉದ್ಯಾನವನ | 26 | 39 | 1 | — | 66 | — | — | 5 | 76 | 81 |
| 2) | ನಾಗರಹೊಳೆ | 19 | 30 | 4 | — | 53 | — | — | — | 15 | 15 |
| 3) | ಬನ್ನೇರುಘಟ್ಟ | — | — | — | — | — | 2 | 3 | — | — | 05 |

| 1 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|
| 4) ಬಿ.ಆರ್.ಟಿ. ಅಭಯಾರಣ್ಯ | 04 | 07 | 1 | — | 12 | 8 | 11 | — | — | 19 |
| 5) ದಾಂಡೇಲಿ ವನ್ಯಜೀವಿ ಅಭಯಾರಣ್ಯ | 03 | 05 | 2 | 1 | 11 | — | — | — | 13 | 13. |
| 6) ಕುದುರೆಮುಖ ರಾಷ್ಟ್ರೀಯ ಉದ್ಯಾನವನ | — | — | — | 2 | 02 | — | — | — | 2 | 2 |
| 7) ಭದ್ರಾ ವನ್ಯಜೀವಿ ಅಭಯಾರಣ್ಯ | 08 | 10 | 3 | — | 21 | 4. | 6 | 1 | — | 11 |
| 8) ಕಾವೇರಿ ವನ್ಯಜೀವಿ ಅಭಯಾರಣ್ಯ | 01 | 01 | — | — | 02 | 5 | 8 | — | — | 13 |
| 9) [illegible] — · · | 01 | — | — | — | 01 | — | — | — | 3 | 03 |

| 1 | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|
| 10) | ಶಿವಮೊಗ್ಗ ವಿಭಾಗ | 07 | 04 | 02 | — | 13 | 9 | 5 | 1 | 2 | 17 |
| 11) | ಚಿಕ್ಕಮಗಳೂರು ವಿಭಾಗ | 04 | 05 | — | — | 09 | 3 | 5 | — | — | 08 |
| 12) | ಕೊಪ್ಪ ವಿಭಾಗ | 05 | 06 | — | — | 11 | 1 | — | — | — | 01 |
| 13) | ಭದ್ರಾವತಿ ವಿಭಾಗ | 04 | 03 | 1 | — | 08 | 4 | 5 | 2 | 8 | 19 |
| 14) | ಸಾಗರ ವಿಭಾಗ | 04 | 06 | 2 | — | 12 | 3 | 8 | 1 | — | 12 |
| 15) | ಗುಲ್ಬರ್ಗಾ ವಿಭಾಗ | — | — | — | — | — | — | — | — | 3 | 03 |
| 16) | ಚಿತ್ರದುರ್ಗ ವಿಭಾಗ | — | — | — | — | — | — | — | — | 48 | 48 |
| 17) | ಬೆಂಗಳೂರು ವಿಭಾಗ | — | ಗ | — | — | — | — | — | — | 10 | 10 |
| 18) | ಹಾಸನ ವಿಭಾಗ | 03 | 03 | — | 1 | 07 | — | 6 | 4 | 07 | 17 |

| 1 | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|
| 19) | ಬಳ್ಳಾರಿ ವಿಭಾಗ | — | — | — | — | — | — | — | — | 25 | 25 |
| 20) | ಮಂಡ್ಯ ವಿಭಾಗ | — | — | — | — | — | — | — | — | 06 | 06 |
| 21) | ಮೈಸೂರು ಪಶ್ಚಿಮ ವಿಭಾಗ, ಹುಣಸೂರು | 01 | 01 | — | — | 02 | — | — | — | 3 | 3 |
| 22) | ಕೊಳ್ಳೇಗಾಲವಿಭಾಗ | 04 | 02 | — | — | 06 | 9 | 7 | 1 | 08 | 25 |
| 23) | ಮೈಸೂರು ವಿಭಾಗ | — | 01 | — | — | 01 | 5 | 11 | 3 | — | 19 |
| 24) | ಬೆಂಗಳೂರು ಗ್ರಾಮ ವಿಭಾಗ | — | — | — | — | — | 2 | 3 | 2 | — | 07 |
| 25) | ತುಮಕೂರು ವಿಭಾಗ | — | — | — | — | — | 2 | 2 | — | — | 04 |
| 26) | ಧಾರವಾಡ ವಿಭಾಗ | — | — | — | — | — | 1 | 3 | 1 | — | 05 |

| 1 | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|
| 27 | ಬೆಳಗಾಂವ | 01 | 01 | — | — | 02 | 1 | 1 | — | 01 | 03 |
| 28 | ಮಂಗಳೂರು ವಿಭಾಗ | 01 | — | 01 | 01 | 03 | — | — | — | — | — |
| 29 | ಮಡಿಕೇರಿ ವಿಭಾಗ | 03 | 05 | — | — | 08 | — | — | — | 12 | 12 |
| 30 | ಕುಂದಾಪುರ ವಿಭಾಗ | 04 | 06 | — | — | 10 | — | — | — | 22 | 22 |
| 31 | ವೀರಾಜಪೇಟೆ | 02 | 04 | — | — | 06 | — | — | — | 06 | 06 |
| 32 | ಹೊನ್ನಾವರ | 03 | 05 | — | 03 | 11 | — | — | — | 07 | 07 |
| 33 | ಕೊಲ್ಲಾಪುರ | 03 | 04 | — | — | 07 | — | — | — | 01 | 01 |
| 34 | ಸಿರ್ಸಿ | 03 | 04 | — | — | 07 | — | — | — | — | — |
| 35 | ಹಳಿಯಾಳ | 02 | 03 | — | 01 | 06 | — | — | — | 02 | 02 |
| 36 | ಕಾರವಾರ | 02 | 03 | — | 01 | 06 | — | — | — | 11 | 11 |
| | ಒಟ್ಟು | 120 | 158 | 17 | 10 | 305 | 59 | 84 | 21 | 291 | 455 |

ಉ) <u>ಬೆಳೆಗಳಿಗೆ, ಸಾಕುಪ್ರಾಣಿಗಳಿಗೆ ಹಾಗು ಮಾನವರಿಗೆ ವನ್ಯಪ್ರಾಣಿಗಳ ಹಲ್ಲೆಯಿಂದ ಆದ ನಷ್ಟ</u>

ಕೃಷಿ ಬೆಳೆಗಳಿಗೆ, ಸಾಕುಪ್ರಾಣಿಗಳಿಗೆ, ಮಾನವರಿಗೆ, ವನ್ಯಪ್ರಾಣಿಗಳಾದ ಹುಲಿ, ಚಿರತೆ, ಆನೆ ಮುಂತಾದವುಗಳಿಂದ ಸದರಿ ಸಾಲಿನಲ್ಲಿ ಆದ ನಷ್ಟ ಹಾಗು ನಷ್ಟ ಅನುಭವಿಸಿದ ಜನರಿಗೆ ಪರಿಹಾರವಾಗಿ ನೀಡಿರುವ ಮೊತ್ತ ಈ ರೀತಿ ತೋರಿಸಿದೆ.

| ಬೆಳೆಗಳ ನಷ್ಟ | | ಪ್ರಾಣಿಗಳ ನಷ್ಟ | | ಮಾನವ ಜೀವಹಾನಿ | |
|---|---|---|---|---|---|
| ಪಿರ್ಯಾದುಗಳ ಸಂಖ್ಯೆ | ಪರಿಹಾರ ಮೊತ್ತ (ಲಕ್ಷ ರೂಗಳಲ್ಲಿ) | ಪಿರ್ಯಾದುಗಳ ಸಂಖ್ಯೆ | ಪರಿಹಾರ ಮೊತ್ತ (ಲಕ್ಷ ರೂಗಳಲ್ಲಿ) | ಪಿರ್ಯಾದುಗಳ ಸಂಖ್ಯೆ | ಪರಿಹಾರ ಮೊತ್ತ (ಲಕ್ಷ ರೂಗಳಲ್ಲಿ) |
| 2038 | 16.43 | 627 | 2.60 | 23 | 4.20 |

11) <u>2406-01-101-08</u>

<u>ಪಶ್ಚಿಮ ಘಟ್ಟಗಳ ಅರಣ್ಯೀಕರಣ ಮತ್ತು ಪರಿಸರ ಯೋಜನೆ(ಸಾಗರೋತ್ತರ ಅಭಿವೃದ್ಧಿ ಆಡಳಿತದ ನೆರವು)</u>

ಪಶ್ಚಿಮ ಘಟ್ಟ ಅರಣ್ಯೀಕರಣ ಮತ್ತು ಪರಿಸರ ಯೋಜನೆ (ಸಾಗರೋತ್ತರ ಅಭಿವೃದ್ಧಿ ಆಡಳಿತ) ಇದು ಒಂದು ಹೊಸ ಯೋಜನೆಯಾಗಿದ್ದು ಇದನ್ನು 8ನೆಯ ಪಂಚವಾರ್ಷಿಕ ಯೋಜನೆಯಲ್ಲಿ ಜಾರಿಗೊಳಿಸಲಾಗುತ್ತಿದೆ. ಇದು ಪಶ್ಚಿಮ ಘಟ್ಟದಲ್ಲಿ ಒಳ್ಳೆಯ ಅರಣ್ಯ ಇದ್ದರೂ ಇದನ್ನು ಸಂರಕ್ಷಿಸುವ ಕಡೆಗೆ ಒತ್ತುಕೊಡಲಾಗಿದೆ. ಸ್ಥಳೀಯ ಜನತೆಯನ್ನು

ಸೇರಿಸಿಕೊಂಡು ಯೋಜನೆ ಮತ್ತು ನಿರ್ವಹಣೆಯನ್ನು ಸಮಂಜಸವಾಗಿ ನಿರ್ವಹಿಸಿ ಮರ ಇಲ್ಲದ ಕಡೆ ಗಿಡ ನೆಡು ವಂತಹ ಕೆಲಸ ಮಾಡಿ ಸ್ವಾಭಾವಿಕವಾಗಿ ಅರಣ್ಯೀಕರಣವಾಗುವಂತೆ ಮಾಡಿ ದರ್ಜೆ ತಗ್ಗಿಸಿದ ಅರಣ್ಯ ಪ್ರದೇಶವನ್ನು ಅಭಿವೃದ್ಧಿ ಪಡಿಸುವುದಾಗಿದೆ. ಸಂಶೋಧನೆ ತರಬೇತಿ ಮತ್ತು ಸಾಮಾನ್ಯ ಮಾಹಿತಿ ಪದ್ಧತಿ ನಿರ್ವಹಣಾ ಮಾಹಿತಿ ಪದ್ಧತಿಗಳ ಸ್ಥಾಪನೆ ಇವುಗಳು ಈ ಯೋಜನೆಯ ಕಾರ್ಯಕ್ರಮ ಗಳು.

ವಾಸ್ತವಿಕ ಗುರಿ:-

ಮುಂಗಡ ಕಾರ್ಯ, ಸಂಶೋಧನೆ ಮತ್ತು ತರಬೇತಿ, ಸಾಮಾನ್ಯ ಮಾಹಿತಿ ಹಾಗೂ ನಿರ್ವಹಣಾ ಮಾಹಿತಿಗಳ ಸ್ಥಾಪನೆ ಮತ್ತು ಅರಣ್ಯ ಪ್ರದೇಶಗಳ ವಲಯಗಳ ವಿಂಗಡಣೆ.

ಸಸಿ ನೆಡುವುದು 8167 ಹೆಕ್ಟೇರ್
ಮುಂಗಡ ಕಾರ್ಯ 8500 ಹೆಕ್ಟೇರ್
ಸಸಿ ಬೆಳೆಸುವುದು ರೂ.83 ಲಕ್ಷ
ಒದಗಿಸಿದ ಮೊತ್ತ ರೂ.1366 ಲಕ್ಷ.

## 12) ಪರಿಹಾರ ನೆಡುತೋಪುಗಳು

ಅರಣ್ಯ ಪ್ರದೇಶವನ್ನು ಅರಣ್ಯೇತರ ಉಪಯೋಗಗಳಿಗೆ ಬಳಸಿಕೊಂಡಾಗ ಅದರಿಂದಾದ ನಷ್ಟವನ್ನು ತುಂಬಲು ಅದಕ್ಕೆ ಪರಿಹಾರವಾಗಿ ಪರಿಹಾರ ನೆಡುತೋಪುಗಳನ್ನು ಬೆಳೆಸಲಾಗುವುದು. 1980ರ ಅರಣ್ಯ ಸಂರಕ್ಷಣೆ ಕಾಯಿದೆಯ ಪ್ರಕಾರ ಅರಣ್ಯ ಪ್ರದೇಶವನ್ನು ಅರಣ್ಯೇತರ ಉಪಯೋಗಕ್ಕಾಗಿ ಬಳಸಿಕೊಂಡಾಗ ಪರಿಹಾರ ನೆಡುತೋಪುಗಳನ್ನು ಬೆಳೆಸಬೇಕಾಗಿರುವುದು ಮುಖ್ಯ ನಿಬಂಧನೆಗಳಲ್ಲಿ ಒಂದಾಗಿರುತ್ತದೆ.

ಪರಿಹಾರ ನೆಡುತೋಪುಗಳನ್ನು ಕೈಗೊಳ್ಳುವಾಗ ಈ ಕೆಳಗಿನ ಸೂತ್ರಗಳನ್ನು ಅನುಸರಿಸಲಾಗುವುದು.

1) ಅರಣ್ಯೇತರ ಭೂಮಿ ಲಭ್ಯವಿದ್ದಾಗ, ಅರಣ್ಯ ಭೂಮಿಯನ್ನು ಬಿಡುಗಡೆ ಮಾಡಲಾದ ಪ್ರದೇಶಕ್ಕೆ ಸಮನಾದ ಪ್ರದೇಶದಲ್ಲಿ ಪರಿಹಾರ ನೆಡುತೋಪು ಕೈಗೊಳ್ಳಲಾಗುವುದು.

2) ಅರಣ್ಯೇತರ ಭೂಮಿ ಲಭ್ಯವಿಲ್ಲದಿದ್ದಾಗ ದರ್ಜೆ ತಗ್ಗಿಸಿದ ಅರಣ್ಯ ಪ್ರದೇಶದಲ್ಲಿ ಅರಣ್ಯ ಭೂಮಿಯನ್ನು ಬಿಡುಗಡೆ ಮಾಡಲಾದ ಪ್ರದೇಶಕ್ಕಿಂತ ಎರಡರಷ್ಟು ಪ್ರದೇಶದಲ್ಲಿ ಪರಿಹಾರ ನೆಡುತೋಪುಗಳನ್ನು ತೆಗೆದುಕೊಳ್ಳಲಾಗುವುದು.

3) ಪರಿಹಾರ ನೆಡುತೋಪು ಕಾರ್ಯಕ್ರಮಕ್ಕಾಗಿ ಗುರುತಿಸಲಾದ ಅರಣ್ಯೇತರ ಪ್ರದೇಶವನ್ನು ಮಾನವರ ಹಾಗೂ ಪ್ರಾಣಿಗಳ ಹಾವಳಿಯಿಂದ ತಪ್ಪಿಸುವದಕ್ಕಾಗಿ ರಕ್ಷಿತ ಅರಣ್ಯವೆಂದು ಘೋಷಿಸಲಾಗುವುದು.

1994-95ನೇ ಸಾಲಿನ ಆರ್ಥಿಕ ಹಾಗೂ ಭೌತಿಕ ಗುರಿಗಳನ್ನು ಈ ಕೆಳಗೆ ಕೊಡಲಾಗಿದೆ.

| ಆರ್ಥಿಕ (ಲಕ್ಷ ರೂ.ಗಳಲ್ಲಿ) | | ಭೌತಿಕ (ಹೆಕ್ಟೇರುಗಳಲ್ಲಿ) | |
|---|---|---|---|
| ಗುರಿ | 93·11 | ಗುರಿ | 1067 |
| ಸಾಧನೆ | 59·13 | ಸಾಧನೆ | 1053 |

13) ಅರಣ್ಯ ಸಂಶೋಧನೆ ಮತ್ತು ಬಳಕೆ

ರಾಜ್ಯದಲ್ಲಿ ನಾಲ್ಕು ಅರಣ್ಯ ಕೃಷಿಕಾಧಿಕಾರಿಗಳು ಈ ವೃತ್ತದ ವ್ಯಾಪ್ತಿಯಲ್ಲಿ ಒಳಗೊಂಡಿದ್ದು, ಅವುಗಳು ಕೇಂದ್ರ ವಲಯ, ಬೆಂಗಳೂರು, ಉತ್ತರ ವಲಯ, ಧಾರವಾಡ, ದಕ್ಷಿಣ ವಲಯ, ಮಡಿಕೇರಿ ಹಾಗೂ ಪೂರ್ವ ವಲಯ ಬಳ್ಳಾರಿ.

ಅರಣ್ಯ ಸಂಶೋಧನಾ ಕಾರ್ಯಕ್ರಮದಲ್ಲಿ ಈ ಕೆಳಗಿನ ವಿಷಯಗಳಿಗೆ ಹೆಚ್ಚಿನ ಪ್ರಾಧಾನ್ಯತೆ ಕೊಡಲಾಗಿದೆ.

1) ಮರ ಅಭಿವೃದ್ಧಿಗೊಳಿಸುವುದು.
2) ಕ್ಲೋನಲ್ ಮಲ್ಟಿಪ್ಲಿಕೇಶನ್.
3) ಜೈವಿಕ ರಸಗೊಬ್ಬರದ ಪ್ರಯೋಗ
4) ಬೀಜೋತ್ಪನ್ನ ಮತ್ತು ಅಭಿವೃದ್ಧಿ
5) ಕೃಷಿ ಅರಣ್ಯ.

ಕ್ರಮ ಸಂಖ್ಯೆ: 4 ಮತ್ತು 5ರ ಕೆಲಸಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಮಾಜಿಕ ಅರಣ್ಯ ಸಂಶೋಧನೆ ಮೊರಸಾನಿವಾಳ್ಯ, ಬೆಂಗಳೂರು ಇವರು ಕಾರ್ಯ ನಿರ್ವಹಿಸುತ್ತಿದ್ದಾರೆ.

ಈ ವರ್ಷ ಬೀಜ ಶೇಖರಣೆಗಾಗಿ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗಿದ್ದು ಆದರಲ್ಲೂ ವಿಶೇಷವಾಗಿ ಬೀಜ ಗಂಭಗಳು, ಕ್ಲೋನಲ್ ಆರ್ಚರ್ಡ್ಸ್ ಮತ್ತು ಉತ್ಕೃಷ್ಟ ಮರಗಳಿಂದ ಬೀಜ ಸಂಗ್ರಹಣೆ ಮಾಡಲಾಗುವುದು. ಕೆಲವು ಕ್ಲೋನಲ್

ಆರ್ಚರ್ಡ್‌ಗಳಿಂದ ಹಣ್ಣುಗಳು ಬರುತ್ತಿದ್ದು, ವಿಶೇಷವಾಗಿ ಧಾರವಾಡ ಮತ್ತು ಮಡಿಕೇರಿ ಕೃಷಿ ವಲಯಗಳಲ್ಲಿ 1979–81 ರಲ್ಲಿ ಬೆಳೆಸಲಾದ ಸಾಗುವಾನಿ ಕ್ಲೋನಲ್ ಆರ್ಚರ್ಡ್‌ಗಳಿಂದ ಹಣ್ಣುಗಳು ಬಹಳ ಚೆನ್ನಾಗಿ ಬರುತ್ತಿವೆ. ಕಸಿ ಮಾಡುವ ವಿಧಾನದ ಮುಖಾಂತರ ಬೆಳೆಸಲಾದ 49 ಉತ್ಕೃಷ್ಟ ಮರಗಳಿಂದ ಸಾಗುವಾನಿ ಕ್ಲೋನಲ್ ಆರ್ಚರ್ಡ್‌ಗಳನ್ನು ಬೆಳೆಸಲಾಗಿದ್ದು, ರಾಜ್ಯದ 49 ಉತ್ಕೃಷ್ಟ ಮರಗಳ ವಿವರ ಈ ಕೆಳಗಿನಂತೆ ಇರುತ್ತವೆ.

| ಕ್ರಮ ಸಂಖ್ಯೆ | ವಿಭಾಗದ ಹೆಸರು | ವಲಯ | ಉತ್ಕೃಷ್ಟ ಮರಗಳ ಸಂಖ್ಯೆ |
|---|---|---|---|
| 1) | ದಾಂಡೇಲಿ ವಿಭಾಗ | ಬರ್ಚಿ | 4 |
| | | ವಿರ್ನೋಲಿ | 8 |
| 2) | ಶಿವಮೊಗ್ಗ ವಿಭಾಗ | ಹರಸಾಲು | 2 |
| | | ಸಕ್ರೇಬೈಲು | 2 |
| 3) | ಹುಣಸೂರು ವಿಭಾಗ | ತಿತಿಮತಿ | 9 |
| | | ನಾಗರಹೊಳೆ | 5 |
| 4) | ಕೊಪ್ಪ ವಿಭಾಗ | ಬಾಳೆಹೊನ್ನೂರು | 5 |
| | | ಎನ್.ಆರ್.ಪುರ | 1 |
| 5) | ಭದ್ರಾವತಿ ವಿಭಾಗ | ಲಕ್ಕವಳ್ಳಿ | 1 |
| 6) | ಮೈಸೂರು ವಿಭಾಗ | ಕಾಕನಕೋಟೆ | 6 |
| 7) | ಚಿಕ್ಕಮಗಳೂರು ವಿಭಾಗ | ಮುತ್ತೋಡಿ | 3 |
| | | ಕೊಲಗಿ | 3 |

ಧಾರವಾಡ ಮತ್ತು ಮಡಿಕೇರಿ ಕೃಷಿ ವಲಯಗಳಲ್ಲಿ ಬೆಳೆಸಲಾದ ಕ್ಲೋನಲ್ ಆರ್ಚರ್ಡ್‌ಗಳಲ್ಲಿ ಈಗಾಗಲೇ ಹಣ್ಣು ಬರುವ ಸೂಚನೆಗಳು ಕಂಡು ಬರುತ್ತಿವೆ.? ಇವುಗಳಿಂದ ಕ್ಲೋನಲ್ ವೈಸ್ ಬೀಜ ಸಂಗ್ರಹಣೆ ಮಾಡಬೇಕಾಗಿದೆ. ಹಾಗೂ ಈ ವಲಯಗಳಲ್ಲಿ ಸಾಗುವಾನಿ ಗಿಡವು ಬಹು ಮುಖ್ಯವಾದ ಸಸ್ಯ ವಾಗಿರುವುದರಿಂದ ಇದರ ಬಗ್ಗೆ ಪ್ರಾವಿನೆನ್ಸ್ ಟ್ರಯಲ್ಸ್ ಪ್ರಯೋಗ ಮಾಡುವ ಬಗ್ಗೆ ಒಂದು ಯೋಜನೆಯನ್ನು ಹಾಕಿಕೊಳ್ಳಲಾಗಿದೆ.

ರಾಜ್ಯಾದ್ಯಂತ 49 ಉತ್ಕೃಷ್ಟ ಮರಗಳನ್ನು ಗುರುತಿಸುವುದರ ಜೊತೆಗೆ ಬೇರೆ ಜಾತಿಯ ಸಾಗುವಾನಿ ಗಿಡಗಳನ್ನು ಶಿವಮೊಗ್ಗ ಜಿಲ್ಲೆಯ ಸಕ್ರೆಬೈಲ್ ಪ್ರದೇಶಗಳಲ್ಲಿ 1976-77ನೇ ಸಾಲಿನಲ್ಲಿ ಬೆಳೆಸಲಾಗಿದ್ದು ಇವುಗಳ ಬೆಳವಣಿಗೆ ಅಷ್ಟೇನು ತೃಪ್ತಿದಾಯಕವಲ್ಲದಿದ್ದರೂ ಸಹ ಇದರ ಕಾಂಡ ಎತ್ತರವಾಗಿ ಬೆಳೆದಿದೆ ಆದರೂ ಸಹ ಮುಂದಿನ ಅಭಿವೃದ್ಧಿಗಾಗಿ ಸದರಿ ಮರದಿಂದ ಬೀಜ ಸಂಗ್ರಹಣೆ ಮಾಡಲಾಗಿದೆ. ಕಸಿ ಮಾಡಿದ ಗಿಡಗಳಿಂದ ಉಯ್ಯು ಉಪಯೋಗಕ್ಕೆ ಬರುವ ಫಲಭರಿತ ಹಣ್ಣುಗಳು ಹುಣಸೆ, ನೆಲ್ಲಿ, ಹಲಸು, ಬೇಲ ಹಾಗೂ ಬೋರೆ ಗಿಡಗಳನ್ನು ಈ ವೃತ್ತದ ಎಲ್ಲಾ ವಲಯಗಳಲ್ಲೂ ಬೆಳೆಸಲಾಗಿದ್ದು ಅವುಗಳ ವಿವರ ಈ ಕೆಳಗಿನಂತೆ ಇರುತ್ತದೆ.

| ಕ್ರಮ ಸಂಖ್ಯೆ | ವಲಯದ ಹೆಸರು | ಕಸಿ ಮಾಡಿದ ಉತ್ಕೃಷ್ಟ ಗಿಡಗಳು |
|---|---|---|
| 1) | ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು | 1,06,000 ಮಾಡು ಮರ: ಮೊಳಕೆ ಕಸಿಗಳು |

| ಕ್ರಮ ಸಂಖ್ಯೆ | ವಲಯ ಹೆಸರು | ಕಸಿ ಮಾಡಿದ ಉತ್ಕೃಷ್ಟ ಗಿಡಗಳು | |
|---|---|---|---|
| 2) | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಮಾಜಿಕ ಅರಣ್ಯ, (ಸಂಶೋಧನೆ) ದೊಡ್ಡಸಾನಿಪಾಳ್ಯ | 30,000 | |
| 3) | ಅರಣ್ಯ ಕೃಷಿಕರು, ಉತ್ತರ ವಲಯ, ಧಾರವಾಡ | 60,000 | |
| 4) | ಅರಣ್ಯ ಕೃಷಿಕರು, ದಕ್ಷಿಣ ವಲಯ, ಮಡಿಕೇರಿ | 30,000 | |
| 5) | ಅರಣ್ಯ ಕೃಷಿಕರು, ಬಳ್ಳಾರಿ | 30,000 | ಹತ್ತಿರ ಸೇರಿಸಿ ಕಸಿ ಮಾಡಿದ ಗಿಡಗಳು |
| | | 25,000 | ಮೊಳಕೆ ಬರಿಸಿ ಕಸಿ ಮಾಡಿದ ಗಿಡಗಳು |

<u>ಉತ್ಕೃಷ್ಟ ಮರಗಳನ್ನು ಗುರುತಿಸುವುದು</u>

ಈ ವರದಿಯ ಅವಧಿಯಲ್ಲಿ ಬೇರೆ ಬೇರೆ ವಲಯಗಳಿಗೆ ಉತ್ಕೃಷ್ಟ ಮರಗಳನ್ನು ಗುರುತು ಮಾಡುವುದಕ್ಕಾಗಿ ಒಂದು ಗುರಿಯನ್ನು ನಿಗದಿಪಡಿಸಲಾಗಿದೆ. ವಿಶೇಷವಾಗಿ ಪ್ರಯೋಗಕ್ಕೆ ಬರುವ ಫಲಭರಿತ ಮರಗಳು ಹಾಗೂ ಮುಂದಿನ ವರ್ಷಕ್ಕೆ ಬೇಕಾಗಿರುವ ಬೀಜಗಳ ಶೇಖರಣೆಗೆ ಹೆಚ್ಚು ಒತ್ತು ಕೊಡುವಂತೆ ಕೃಷಿಕಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ.

ಈ ವರ್ಷ ಉತ್ಕೃಷ್ಟ ಮರಗಳನ್ನು ಗುರುತಿಸಿ ಬೇಕಾಗಿರುವ ವಿವರ ಈ ಕೆಳಗಿನಂತೆ ಇದೆ.

| ಕ್ರಮ ಸಂಖ್ಯೆ | ವಲಯ | ಉತ್ಕೃಷ್ಟ ಮರಗಳ ಸಂಖ್ಯೆ |
|---|---|---|
| 1) | ಅರಣ್ಯ ಕೃಷಿಕಾಧಿಕಾರಿಗಳು, ಕೇಂದ್ರ ವಲಯ, ಬೆಂಗಳೂರು | 300 |
| 2) | ಅರಣ್ಯ ಕೃಷಿಕಾಧಿಕಾರಿಗಳು, ದಕ್ಷಿಣ ವಲಯ, ಮಡಿಕೇರಿ | 500 |
| 3) | ಅರಣ್ಯ ಕೃಷಿಕಾಧಿಕಾರಿಗಳು, ಉತ್ತರ ವಲಯ, ಧಾರವಾಡ | 500 |
| 4) | ಅರಣ್ಯ ಕೃಷಿಕಾಧಿಕಾರಿಗಳು, ಬಳ್ಳಾರಿ | 200 |

**ಬೀಜೋತ್ಪನ್ನ ಉದ್ಯಾನ ವನಗಳನ್ನು ಗುರುತಿಸುವುದು:**

ಈಗಿರುವ ಬೀಜೋತ್ಪನ್ನ ಉದ್ಯಾನ ವನಗಳ ಜೊತೆಗೆ ಹೆಚ್ಚಿನ ಬೀಜೋತ್ಪನ್ನ ಉದ್ಯಾನವನಗಳನ್ನು ನಿರ್ಮಿಸಿ, ಅರಣ್ಯ ಇಲಾಖೆಗೆ ಬೇಕಾಗಿರುವ, ಉತ್ತಮ ಗುಣ ಮಟ್ಟದ ಬೀಜಗಳನ್ನು ತಯಾರಿಸಿ ಸರಬರಾಜು ಮಾಡಲಾಗುವುದು. ಈಗ ಇರುವಂತೆ ಬೀಜೋತ್ಪನ್ನ ಉದ್ಯಾನವನಗಳಲ್ಲಿ ಸಂಶೋಧನಾ ವಿಭಾಗದಿಂದ ಇಲಾಖೆಗೆ ಬೇಕಾಗಿರುವ ಬೀಜಗಳ ಕೋರಿಕೆಯಲ್ಲಿ (ವಿಶೇಷವಾಗಿ ಸಾಗುವಾನಿ ಬೀಜಗಳು) ಶೇಕಡಾ 30 ರಷ್ಟನ್ನು ಈ ವೃತ್ತದಿಂದ ಸರಬರಾಜು ಮಾಡಲಾಗುವುದು. ಧಾರವಾಡ ಮತ್ತು ಮಡಿಕೇರಿ ವಲಯಗಳಲ್ಲಿ ಬೀಜೋತ್ಪನ್ನ ಉದ್ಯಾನವನಗಳನ್ನು ನಿರ್ಮಿಸುವುದಕ್ಕಾಗಿ ಹೆಚ್ಚಿನ ಮಹತ್ವ ಕೊಡಲಾಗಿದೆ. ಅವುಗಳ ವಿವರ ಈ ಕೆಳಗಿನಂತೆ ಇರುತ್ತದೆ.

| ಕ್ರಮ ಸಂಖ್ಯೆ | ವಲಯದ ಹೆಸರು | ಬೀಜೋತ್ಪನ್ನ ವಿಸ್ತೀರ್ಣ ಹೆಕ್ಟೇರುಗಳಲ್ಲಿ |
|---|---|---|
| 1) | ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು | 150 ಹೆ.(ಹಣ್ಣುಗಳ ಉಪಯೋಗದ ಬೀಜಗಳು) |
| 2) | ಅರಣ್ಯ ಕೃಷಿಕರು, ದಕ್ಷಿಣ ವಲಯ ಮಡಿಕೇರಿ | 200 ಹೆ. (ಮುಖ್ಯವಾಗಿ ಸಾಗುವಾನಿ) |
| 3) | ಅರಣ್ಯ ಕೃಷಿಕರು, ಉತ್ತರ ವಲಯ, ಧಾರವಾಡ | 200 ಹೆ. |
| 4) | ಅರಣ್ಯ ಕೃಷಿಕರು, ಬಳ್ಳಾರಿ | 50 ಹೆ. |

ಸದರಿ ಬೀಜೋತ್ಪನ್ನ ಉದ್ಯಾನವನಗಳಲ್ಲಿ ಮುಂಬರುವ ವರ್ಷಗಳಲ್ಲಿ ಹೆಚ್ಚಿನ, ಬೀಜೋತ್ಪನ್ನ ಮಾಡುವ ಸಲುವಾಗಿ ಸದರಿ ಪ್ರದೇಶಗಳಲ್ಲಿ ಕೆಲವು ಮಣ್ಣಿನ ಸಂರಕ್ಷಣಾ ಕಾರ್ಯ ಕ್ರಮಗಳನ್ನು ತೆಗೆದುಕೊಳ್ಳಲಾಗಿ, ಇದರಲ್ಲಿ ಬೆಳೆದಿರುವ ಲೋರಾನ್ಥಸ್ ಗಿಡಗಳನ್ನು ತೆಗೆದು ಹಾಕುವುದು ಮತ್ತು ಗಿಡದ ಪೋಷಣೆ ಮಾಡಲಾಗಿದೆ.

## ಕ್ಲೋನಲ್ ಆರ್ಚರ್ಡ್ಸ್ ಮತ್ತು ಬೀಜೋತ್ಪನ್ನ ಉದ್ಯಾನವನಗಳ ಗಿಡಗಳು

ಮುಂದಿನ ವರ್ಷ ಈ ಕೆಳಕಂಡ ವಲಯಗಳಲ್ಲಿ ಕ್ಲೋನಲ್ ಆರ್ಚರ್ಡ್ಸ್ ಮತ್ತು ಬೀಜೋತ್ಪನ್ನ ಉದ್ಯಾನವನಗಳ ಗಿಡಗಳನ್ನು ಹೆಚ್ಚಿಸಲು ಒಂದು ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ. ಅದರ ವಿವರ ಈ ರೀತಿ ಇದೆ.

| ಕ್ರಮ ಸಂಖ್ಯೆ | ವಲಯದ ಹೆಸರು | ವಿಸ್ತೀರ್ಣ ಹೆ.ಗಳಲ್ಲಿ |
|---|---|---|
| 1) | ಅರಣ್ಯ ಕೃಷಿಕಾಧಿಕಾರಿಗಳು, ಕೇಂದ್ರ ವಲಯ, ಬೆಂಗಳೂರು | 40 ಹೆ. |
| 2) | ಅರಣ್ಯ ಕೃಷಿಕಾಧಿಕಾರಿಗಳು, ಉತ್ತರ ವಲಯ, ಧಾರವಾಡ | 40 ಹೆ. |
| 3) | ಅರಣ್ಯ ಕೃಷಿಕಾಧಿಕಾರಿಗಳು, ದಕ್ಷಿಣ ವಲಯ, ಮಡಿಕೇರಿ | ಇಲ್ಲ |
| 4) | ಅರಣ್ಯ ಕೃಷಿಕಾಧಿಕಾರಿಗಳು, ಬಳ್ಳಾರಿ | 100 ಹೆ. |

ಇದಕ್ಕಾಗಿ ಮುಂಗಡ ಕಾಮಗಾರಿ ಕೆಲಸ ಪ್ರಗತಿಯಲ್ಲಿದ್ದು ಇದೆ ಮಾರ್ಚ್ 1995ರ ವೇಳೆಗೆ ಮುಗಿಯುತ್ತದೆ.

ಈ ವರ್ಷ ಕ್ಲೋನಲ್ ಆರ್ಚರ್ಡ್ ಮತ್ತು ಬೀಜೋತ್ಪನ್ನ ಉದ್ಯಾನವನದಲ್ಲಿನ ಗಿಡಗಳನ್ನು ವಿವಿಧ ವಲಯಗಳಲ್ಲಿ ಬೆಳೆಸಲಾಗಿದ್ದು ಅವುಗಳ ವಿವರ ಈ ಕೆಳಗಿನಂತೆ ಇರುತ್ತದೆ.

| ಕ್ರಮ ಸಂಖ್ಯೆ | ವಲಯದ ಹೆಸರು | ವಿಸ್ತೀರ್ಣ ಹೆ.ಗಳಲ್ಲಿ | ಬೆಳೆಸಲಾದ ಗಿಡಗಳು |
|---|---|---|---|
| 1) | ಅರಣ್ಯ ಕೃಷಿಕಾಧಿಕಾರಿಗಳು, ಕೇಂದ್ರ ವಲಯ, ಬೆಂಗಳೂರು | 52.50 ಹೆ. | ಹುಣಸೆ, ಹಲಸು, ನೆಲ್ಲಿ, ಸೀತಾಫಲ ಮತ್ತು ಯಮಲಾಕಲಿ ಪಟಸೆ. |

| ಕ್ರಮ ಸಂಖ್ಯೆ | ವಲಯದ ಹೆಸರು | ವಿಸ್ತೀರ್ಣ ಹೆ·ಗಳಲ್ಲಿ | ಬೆಳೆಸಲಾದ ಗಿಡಗಳು |
|---|---|---|---|
| | ಹೊಸದಾಗಿ ಪರಿಚಯಿಸಿದ ಗಿಡಗಳು | 8·00 ಹೆ· | ನೆಲ್ಲಿ, ಹುಣಸೆ ಹಲಸು ಮತ್ತು ದಿಂಡಿಗಾ |
| 2) | ಅರಣ್ಯ ಕೃಷಿಕಾಧಿಕಾರಿಗಳು ದಕ್ಷಿಣ ವಲಯ, ಮಡಿಕೇರಿ | 103·05ಹೆ· | ನೆಲ್ಲಿ, ಹುಣಸೆ, ಅಂಟುವಾಳ, ಸಾಗುವಾನಿ ಮತ್ತು ರೆಡ್ ಅಂಬಲ್ ಫಾವಲ್ ನೆಡು ತೋಪು |
| 3) | ಅರಣ್ಯ ಕೃಷಿಕಾಧಿಕಾರಿಗಳು, ಬಳ್ಳಾರಿ | 35·00 ಹೆ· | ಹುಣಸೆ, ಬೋರೆ, ನೆಲ್ಲಿ, ತಾಳೆ, ಬೇಲ, ಹಿಪ್ಪೆ, ಶೀಗೆ, ಅಂಟುವಾಳ, ಬೇವು ಹೊಂಗೆ, ಬಾಗೆ, ಜಾಲಿ ಬಸರಿ, ಆಕೇಶಿಯಾ ಹೈಬ್ರಿಡ್ ಇತ್ಯಾದಿ· |

ಹಸಿರು ಕೋಟೆ ಮತ್ತು ಮಂಜು ತೋಟಗಳ ನಿರ್ಮಾಣ

(ಎಸ್ಟಾಬ್ಲಿಷಮೆಂಟ್ ಆಫ್ ಗ್ರೀನ್ ಹಾಸನ್ ಅಂಡ್ ವಿನ್ಸ್ಟ ಬೇಂಬರ್)

ಈ ಕೆಳಗೆ ಸೂಚಿಸಿರುವ ಪ್ರದೇಶದಲ್ಲಿ ಹಸಿರು ತೋಟಗಳ ನಿರ್ಮಾಣ ಕಾರ್ಯ ಪ್ರಗತಿಯಲ್ಲಿದ್ದು ಅವುಗಳು ಮುಂಬರುವ ಏಪ್ರಿಲ್ 1995 ರಿಂದ ಕೆಲಸ ಪ್ರಾರಂಭಿಸುತ್ತವೆ·





ಧಾರವಾಡ ಮತ್ತು ದೇವಬಾಳಗಳಲ್ಲಿ ನಿರ್ಮಾಣ ಕಾರ್ಯ ಸಂಪೂರ್ಣವಾಗಿದೆ. ಮತ್ತು ಎಲವಾಲದಲ್ಲಿಯೂ ಸಹ ಇದೆ ಏಪ್ರಿಲ್ 1995 ರಿಂದ ಕೆಲಸ ಪ್ರಾರಂಭವಾಗಲಿದೆ.

| ಕ್ರಮ ಸಂಖ್ಯೆ | ವಲಯದ ಹೆಸರು | ಹಸಿರು ಕೊಠಡಿಗಳನ್ನು ನಿರ್ವಹಿಸುತ್ತಿರುವ ಸ್ಥಳಗಳು |
| --- | --- | --- |
| 1) | ಅರಣ್ಯ ಕೃಷಿಕಾಧಿಕಾರಿಗಳು ಕೇಂದ್ರ ವಲಯ, ಬೆಂಗಳೂರು | ದೊಡ್ಡಸಾನಿಪಾಳ್ಯ ಹೊಸಕೋಟೆ |
| 2) | ಅರಣ್ಯ ಕೃಷಿಕಾಧಿಕಾರಿಗಳು ಉತ್ತರ ವಲಯ, ಧಾರವಾಡ | ಗುಂಗರಗಟ್ಟಿ ದೇವಬಾಳ ದಾಂಡೇಲಿ |
| 3) | ಅರಣ್ಯ ಕೃಷಿಕಾಧಿಕಾರಿಗಳು, ದಕ್ಷಿಣ ವಲಯ, ಮಡಿಕೇರಿ | ಎಲವಾಲ |

ಇದಲ್ಲದೆ, ಬಳ್ಳಾರಿ ಅರಣ್ಯ ಕೃಷಿಕಾಧಿಕಾರಿಗಳ ವ್ಯಾಪ್ತಿಯಲ್ಲಿ ಬರುವ ಚಳ್ಳಕೆರೆ ಹಾಗೂ ಹಿರಿಯೂರ್ ಸಸ್ಯ ಕ್ಷೇತ್ರಗಳಲ್ಲಿಯೂ ಸಹ ಮಂಜು ಕೊಠಡಿಗಳ ನಿರ್ಮಾಣ ಕಾರ್ಯ ಪ್ರಗತಿಯಲ್ಲಿದೆ.

ಬೀಜೋತ್ಪನ್ನ ಘಟಕಗಳು

ಈ ವೃತ್ತದಲ್ಲಿ 4 ಬೀಜೋತ್ಪನ್ನ ಘಟಕಗಳು ಇವೆ. ಅವುಗಳು ದೊಡ್ಡಸಾನಿಪಾಳ್ಯ (ಬೆಂಗಳೂರು), ದೇವಬಾಳ್, ಗುಂಗರಗಟ್ಟಿ (ಧಾರವಾಡ), ಎಲವಾಲ (ಮೈಸೂರು) ಈ 4 ಬೀಜೋತ್ಪನ್ನ ಘಟಕಗಳ ಕೆಲಸ ಕಾರ್ಯಗಳನ್ನು ನೋಡಿಕೊಳ್ಳುವ ಜವಾಬ್ದಾರಿಯು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಸಾಮಾಜಿಕ ಅರಣ್ಯ (ಸಂಶೋಧನೆ), ದೊಡ್ಡಸಾನಿಪಾಳ್ಯ ಇವರದಾಗಿರುತ್ತವೆ. ಸದರಿ ಬೀಜೋತ್ಪನ್ನ ಘಟಕಗಳ ಮುಖ್ಯ-

ಕೆಲಸವೇನೆಂದರೆ ಬೀಜಗಳನ್ನು ಶುಚಿ ಮಾಡುವುದು, ಒಣಗಿಸುವುದು, ವಿಂಗಡಿಸುವುದು ಮತ್ತು ಶೇಕಡಾವಾರು ಬೆಳವಣಿಗೆಯ ಬಗ್ಗೆ ಒಂದು ಪ್ರಮಾಣ ಪತ್ರ (ಸರ್ಟಿಫಿಕೇಟ್) ನೀಡುವುದು. ಈ ಎಲ್ಲಾ ಬೀಜೋತ್ಪನ್ನ ಘಟಕಗಳು ಇದೇ 'ಏಪ್ರಿಲನಿಂದ ತಮ್ಮ ಕಾರ್ಯಕ್ರಮವನ್ನು ಪ್ರಾರಂಭಿಸಿವೆ.

ಈಗಾಗಲೇ ಧಾರವಾಡ ಮತ್ತು ದೇವಬಾಳನಲ್ಲಿ ಇರುವ ಬೀಜೋತ್ಪನ್ನ ಘಟಕಗಳ ಕೆಲಸ ಕಾರ್ಯಗಳು ನಡೆಯುತ್ತಿದ್ದು ಇನ್ನುಳಿದ ಎರಡು ಘಟಕಗಳು 'ಏಪ್ರಿಲ 1995ರ ಒಳಗೆ ಕೆಲಸ ಕಾರ್ಯಗಳನ್ನು ಪ್ರಾರಂಭಿಸಿವೆ. ಉತ್ತಮ ಮಟ್ಟದ ಬೀಜಗಳನ್ನು ಸರಬರಾಜು ಮಾಡುವಂತೆ ನೋಡಿಕೊಳ್ಳುವ ಜವಾಬ್ದಾರಿಯು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಮಾಜಿಕ ಅರಣ್ಯ (ಸಂಶೋಧನೆ) ದೊರೆಸಾನಿಪಾಳ್ಯ ಇವರದಾಗಿರುತ್ತದೆ.

ಸಂಶೋಧನಾ ವಿಭಾಗದಲ್ಲಿ ತೆಗೆದುಕೊಂಡ ಹೊಸ ಪ್ರಯೋಗಗಳು:

ಅನೇಕ ವಿಧದ ಪ್ರಯೋಗಗಳಾದ ಜೈವಿಕ ರಸ ಗೊಬ್ಬರ ಮತ್ತು ಸೂಕ್ಷ್ಮ ಕ್ರಿಮಿಗಳ ಪ್ರಯೋಗಗಳನ್ನು ಅರಣ್ಯ ಕೃಷಿಕಾಧಿಕಾರಿಗಳು ಹಮ್ಮಿಕೊಂಡಿದ್ದು ಅವುಗಳ

ಫಲಿತಾಂಶ ಇನ್ನು ಅವಲೋಕನ ಸ್ಥಿತಿಯಲ್ಲಿದೆ. ಅರಣ್ಯ ಕೃಷಿಕಾಧಿಕಾರಿಗಳು, ಧಾರವಾಡದವರು ಸೂಕ್ಷ್ಮ ಕ್ರಿಮಿಗಳಿಗೆ ತಾಂತ್ರಿಕತೆಯನ್ನು ಗೊತ್ತುಪಡಿಸಿ ಮೊದಲ ಪ್ರಯೋಗಗಳನ್ನು ನರ್ಸರಿ ಗಿಡಗಳ ಮೇಲೆ ಮಾಡಿ ಅದರಿಂದ ಬರುವಂತೆ ಲಾಭಗಳನ್ನು ಗುರುತಿಸಿದ್ದಾರೆ. ಅರಣ್ಯ ಕೃಷಿಕಾಧಿಕಾರಿಗಳು, ಕೇಂದ್ರ ವಲಯ, ಬೆಂಗಳೂರು ರವರು ವಿವಿಧ ರೀತಿಯ ಕ್ಲೋನಲ ಆರ್ಚರ್ಡಗಳಾದ ಹುಣಸೆ, ಹಲಸು, ನೆಲ್ಲಿ ಮತ್ತು ಸೀತಾಫಲ ಗಿಡಗಳನ್ನು ಬೆಳೆಸಿದ್ದಾರೆ. ಮತ್ತು ವಿವಿಧ ಪ್ರದೇಶಗಳಲ್ಲಿ ಸಾವಯವ ಮತ್ತು ನಿರವಯವದ ಸಸ್ಯಗಳ ಬೆಳವಣಿಗೆ ಬಗ್ಗೆ ಜೈವಿಕ ರಸಗೊಬ್ಬರದ ಪ್ರಯೋಗ ನಡೆಸಿದ್ದಾರೆ. ಇದೇ ರೀತಿಯ ಪ್ರಯೋಗಗಳನ್ನು ಬಳ್ಳಾರಿ ಅರಣ್ಯ ಕೃಷಿಕಾಧಿಕಾರಿಗಳು, ಚಳ್ಳಕೆರೆ ಪ್ರದೇಶದಲ್ಲಿ ಹುಣಸೆ ಗಿಡಗಳ ಮೇಲೆ ಪ್ರಯೋಗ ನಡೆಸಿದ್ದಾರೆ. ಅಲ್ಲದೆ ಇದರ ಸಂಶೋಧನಾ ವಲಯದಲ್ಲಿನ ಸಹಪುರ ಮತ್ತು ಸಿರನೂರ ಸಸ್ಯ ಕ್ಷೇತ್ರಗಳಲ್ಲಿ ಅಕೇಶಿಯಾ ಹೈಬ್ರಿಡಿನ ಪ್ರಾವಿನನ್ಸ್ ಟ್ರಯಲ್ಸನ್ನು ಹೆಚ್ಚಿಗೆ ಮಾಡಿದ್ದಾರೆ.

## ಹಳೆಯ ಸಂಶೋಧನಾ ಪ್ರದೇಶಗಳು ಮತ್ತು ಎಲ್.ಟಿ.ಐ.

### ಪ್ರದೇಶಗಳ ಸಂರಕ್ಷಣೆ

ಸಂಶೋಧನಾ ನಿಯಮದ ಪ್ರಕಾರ ಹಳೆಯ ಸಂಶೋಧನಾ ಪ್ರದೇಶಗಳು ಮತ್ತು ಎಲ್.ಟಿ.ಐ. ಪ್ರದೇಶಗಳನ್ನು ಮುಂದಿನ ಅವಲೋಕನೆಗಾಗಿ ಮತ್ತು ಡೆಟಾ ಸಂಗ್ರಹಣೆಗಾಗಿ ಸಂರಕ್ಷಿಸಿಕೊಂಡು ಹೋಗುವಂತೆ ಸಂಬಂಧಿಸಿದ ಕೃಷಿಕಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ. ಹಾಗೂ ಹಿಂದೆ ಬೆಳೆಸಲಾದ ಗಿಡ ಮರಗಳ ವನಗಳನ್ನು ಸಹ ಸಂರಕ್ಷಿಸಿಕೊಂಡು ಹೋಗುವಂತೆ ಸೂಚನೆ ನೀಡಲಾಗಿದೆ.

### 'ಓ.ಡಿ.ಎ. ಅಡಿಯಲ್ಲಿ ಸಂಶೋಧನಾ ಚಟುವಟಿಕೆಗಳು

'ಓ.ಡಿ.ಎ. ತಂಡದವರು ಆಕೇಶಿಯಾ ಆರಿಕ್ಯುಲಿಫಾರ್ಮಿಸ್. ಕ್ಯಾಸುರೀನ ಇಕ್ವಿಸಿಟಿಫೋಲಿಯಾ ಮತ್ತು ಯೂಕಲಿಪ್ಟಸ್ ಕಮಾಲ್ಡುಲೆನ್ಸಿಸ್ ಗಿಡಗಳ ಮೇಲೆ ಅವುಗಳ ಬೆಳವಣಿಯ ದರ ವರ್ಷ 0 – 4, 8 –12 ರವರೆಗೆ ಡೆಟಾ ಸಂಗ್ರಹಣೆ ಮಾಡಿದಾರೆ. ಸದರಿ ಗಿಡಗಳನ್ನು ಸಂಶೋಧನಾ ಮತ್ತು ಪ್ರಾದೇಶಿಕ ವಿಭಾಗಗಳಲ್ಲಿನ ಬೆಂಗಳೂರಿನ ಸುತ್ತ ಮುತ್ತಲ ಪ್ರದೇಶಗಳಲ್ಲಿ ಬೆಳೆಸಲಾಗಿದೆ. ಸದರಿ ಓ.ಡಿ.ಎ. ತಂಡಕ್ಕೆ ಬೆಂಗಳೂರು ಅರಣ್ಯ ಕೃಷಿಕಾಧಿಕಾರಿಗಳು ಸಹಾಯ ನೀಡುತ್ತಿದಾರೆ.

## 14) ಸಾಮಾಜಿಕ ಅರಣ್ಯ ಯೋಜನೆ:

ಸಾಮಾಜಿಕ ಅರಣ್ಯ ಯೋಜನೆಯ ಕೆಲಸ ಕಾರ್ಯಗಳು ಜಿಲ್ಲಾ ವಲಯದಡಿಯಲ್ಲಿ ಜಿಲ್ಲಾ ಪಂಚಾಯತ್ ಅಧೀನದ ಸಾಮಾಜಿಕ ಅರಣ್ಯ ವಿಭಾಗಗಳಲ್ಲಿ ಹಾಗೂ ಸ್ವಲ್ಪಮಟ್ಟಿನ ಕೆಲಸ ಕಾರ್ಯಗಳು ರಾಜ್ಯವಲಯ ಅಡಿಯಲ್ಲಿ ಪ್ರಾದೇಶಿಕ ವಿಭಾಗಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಗ್ರಾಮಾಂತರ ಪ್ರದೇಶದ ಜನರ ಅವಶ್ಯಕತೆಗಳಾದ ಉರುವಲು ಕಟ್ಟಿಗೆ, ಮರ ಮುಟ್ಟುಗಳು, ದನಕರುಗಳಿಗೆ ಮೇವು, ಗುಡಿ ಕೈಗಾರಿಕೆಗಳಿಗೆ ಅಗತ್ಯವಾದ ಬಿದಿರು ಹಾಗೂ ಖಾಸಗೀ ಭೂಮಿಯಲ್ಲಿ ಕೃಷಿ ವನಗಳ ಅಭಿವೃದ್ಧಿ ಇವು ಯೋಜನೆಯ ಮುಖ್ಯ ಉದ್ದೇಶಗಳು. ಈ ಯೋಜನೆಯಡಿಯಲ್ಲಿ ಬೆಳೆಸಲಾದ ನೆಡುತೋಪುಗಳ ನಿರ್ವಹಣೆಯನ್ನು ಗ್ರಾಮ ಅರಣ್ಯ ಸಮಿತಿಗಳ ಮುಖಾಂತರ ಗ್ರಾಮೀಣ ಜನರು ಸತತವಾಗಿ ನೋಡಿಕೊಂಡು ಸಹಭಾಗಿತ್ವದ ಆಧಾರದ ಮೇಲೆ ಸ್ವಂತ ಉಪಯೋಗಕ್ಕೆ ಪಡೆದುಕೊಳ್ಳಲು ಮತ್ತು ಆದಾಯದಲ್ಲಿ ಪಾಲು ಪಡೆಯಲು ಅವಕಾಶ ಕಲ್ಪಿಸಲಾಗಿದೆ.

1994-95ನೇ ಸಾಲಿನ (ವಾರ್ಷಿಕ) ಭೌತಿಕ ಹಾಗೂ ಆರ್ಥಿಕ ಗುರಿ-ಈ ಕೆಳಕಂಡಂತಿದೆ:

ಜಿಲ್ಲಾ ವಲಯ:

| | |
|---|---|
| ನೆಡುತೋಪುಗಳ ನಿರ್ವಹಣೆ | 3567 ಹೆಕ್ಟೇರುಗಳು |
| ನೆಡುತೋಪುಗಳ ನಿರ್ಮಾಣ | 699 ಹೆಕ್ಟೇರುಗಳು |
| ಮುಂಗಡ ಕೆಲಸ | 790 ಹೆಕ್ಟೇರುಗಳು |
| ಸಸಿ ಬೆಳೆಸುವುದು | 21.224 ಲಕ್ಷಗಳು |
| ಆರ್ಥಿಕ ಗುರಿ | 912 ಲಕ್ಷ ರೂ.ಗಳು |
| ಆರ್ಥಿಕ ಸಾಧನೆ | 617.031 ಲಕ್ಷ ರೂ.ಗಳು |

| ರಾಜ್ಯ ವಲಯ: | ಸಾಧನೆ: |
|---|---|
| ನೆಡುತೋಪುಗಳ ನಿರ್ವಹಣೆ | 3396 ಹೆಕ್ಟೇರುಗಳು – |
| ನೆಡುತೋಪುಗಳ ನಿರ್ಮಾಣ | 2960 ಹೆಕ್ಟೇರುಗಳು 3184 |
| ಆರ್ಥಿಕ ಗುರಿ | 280 ಲಕ್ಷ ರೂ.ಗಳು |
| ಆರ್ಥಿಕ ಸಾಧನೆ | ರೂ.163.002 ಲಕ್ಷಗಳು (ಡಿಸೆಂಬರ್ 94ರ ಅಂತ್ಯದವರೆಗೆ) |

15) ಭೂಸಾರ ಸಂರಕ್ಷಣೆ (ಅರಣ್ಯೀಕರಣ) ಯೋಜನೆ:

ಬಂಜರು ಪ್ರದೇಶದಲ್ಲಿ ಭೂ ಸವೆತವನ್ನು ತಡೆಗಟ್ಟಲು ಗಿಡಗಳನ್ನು ಹಾಕಿ ನೆಡುತೋಪು ನಿರ್ಮಿಸಲಾಗುತ್ತಿದೆ. ಅಲ್ಲದೆ ಈ ಯೋಜನೆಯಲ್ಲಿ ಉರುವಲು ಕಟ್ಟಿಗೆ, ಸಣ್ಣ ಮರ ಮುಟ್ಟುಗಳು ಉತ್ಪಾದನೆಯೂ ಸೇರಿದೆ.

ಭೌತಿಕ ಗುರಿ: (ವಾರ್ಷಿಕ)

| | |
|---|---|
| ನೆಡುತೋಪುಗಳ ನಿರ್ವಹಣೆ | 1860 ಹೆಕ್ಟೇರುಗಳು |
| ನೆಡುತೋಪುಗಳ ನಿರ್ಮಾಣ | 666 ಹೆಕ್ಟೇರುಗಳು |
| ಮುಂಗಡ ಕೆಲಸ | 376 ಹೆಕ್ಟೇರುಗಳು |
| ಸಸಿ ಬೆಳೆಸುವುದು | 13.165 ಲಕ್ಷಗಳು |
| ಆರ್ಥಿಕ ಗುರಿ | 119.370 ಲಕ್ಷ ರೂ.ಗಳು. |

16) ವಿಕೇಂದ್ರೀಕೃತ ಸಸ್ಯಕ್ಷೇತ್ರ ಯೋಜನೆ:

ಈ ಯೋಜನೆಯಡಿಯಲ್ಲಿ ಸ್ವಯಂ ಸೇವಾ ಸಂಸ್ಥೆಗಳು, ಮಹಿಳೆಯರು ಹಾಗೂ ಯುವಕರಿಗೆ ಈ ಯೋಜನೆಯಡಿಯಲ್ಲಿ ಹಣ ಸಹಾಯ ನೀಡಿ ಸಸ್ಯಕ್ಷೇತ್ರಗಳಲ್ಲಿ ಸಸಿ ಬೆಳೆಸಲಾಗುತ್ತಿದೆ. ಇದರಿಂದ ಸ್ವಯಂ ಉದ್ಯೋಗ ಹಾಗೂ ಆದಾಯ ಉತ್ಪಾದನೆಗೆ ಅವಕಾಶ ಕಲ್ಪಿಸಲಾಗಿದೆ. ಈ ರೀತಿ ಬೆಳೆಸಿದ ಸಸಿಗಳನ್ನು ಬೇಡಿಕೆಯ ಅನುಸಾರ ಸಾರ್ವಜನಿಕರಿಗೆ

ಮಾರಾಟ ಮಾಡಬಹುದಾಗಿದೆ ಹಾಗೂ ಉಳಿದ ಸಸಿಗಳನ್ನು ಇಲಾಖಾ ಉಪಯೋಗಕ್ಕೆ ಪಡೆದು ಕೊಳ್ಳಲಾಗುವುದು.

| | |
|---|---|
| ಸಸಿ ನಿರ್ವಹಣೆ : | 39.710 ಲಕ್ಷಗಳು |
| ಸಸಿ ಹಂಚಿಕೆ | 48.51 ಲಕ್ಷಗಳು |
| ವಾರ್ಷಿಕ ಬೆಳೆಸುವ ಗುರಿ | 55.180 ಲಕ್ಷಗಳು |
| ಆರ್ಥಿಕ ಗುರಿ | 43.350 ಲಕ್ಷ ರೂ.ಗಳು. |

17) <u>ಶಾಲಾ ಸಸ್ಯಕ್ಷೇತ್ರ ಯೋಜನೆ:</u>

ಈ ಯೋಜನೆಯು ಶಾಲಾ ಮಕ್ಕಳಲ್ಲಿ ಪರಿಸರ ಮತ್ತು ಗಿಡಮರಗಳ ಪ್ರಜ್ಞೆ ಮತ್ತು ಸಸಿಬೆಳೆಸಲು ಒಲವನ್ನು ಮೂಡಿಸುವ ಸಲುವಾಗಿ ಅನುಷ್ಠಾನಗೊಂಡಿದೆ. ನೀರಿನ ಸೌಕರ್ಯ ಹಾಗೂ ಶಾಲೆಯಲ್ಲಿ ಲಭ್ಯವಿದ್ದ ಜಮೀನು : ಅಂಗಳಗಳಲ್ಲಿ ವಿದ್ಯಾರ್ಥಿಗಳ ಸಕ್ರಿಯ ಪಾಲ್ಗೊಳ್ಳುವಿಕೆಯೊಂದಿಗೆ ಸಸಿ ಬೆಳೆಸಲಾಗುತ್ತಿದೆ.

<u>ವಾರ್ಷಿಕ ಭೌತಿಕ ಗುರಿ:</u>

| | |
|---|---|
| ಸಸಿಗಳ ನಿರ್ವಹಣೆ | 34.580 ಲಕ್ಷಗಳು |
| ಸಸಿಗಳ ಹಂಚಿಕೆ | 26.650 ಲಕ್ಷಗಳು |
| ಸಸಿಗಳನ್ನು ಬೆಳೆಸುವುದು | 30.040 ಲಕ್ಷಗಳು |
| ಆರ್ಥಿಕ ಗುರಿ | ರೂ.26.990 ಲಕ್ಷಗಳು |

18) <u>ಕಟ್ಟಡಗಳು:</u>

ಇಲಾಖಾ ನೌಕರರಿಗೆ ವಸತಿ ಸೌಕರ್ಯ ಒದಗಿಸಲು ಹಾಗೂ ಕಛೇರಿಯ ಸ್ಥಳಾವಕಾಶಕ್ಕಾಗಿ ಈ ಯೋಜನೆಯಡಿಯಲ್ಲಿ ಕಟ್ಟಡಗಳನ್ನು ನಿರ್ಮಿಸಲಾಗುತ್ತಿದೆ.

| | |
|---|---|
| ಕಟ್ಟಡಗಳ ಸಂಖ್ಯೆ: | ನಿರ್ಮಾಣ: 12 |
| | ನಿರ್ವಹಣೆ: 5 |
| ಆರ್ಥಿಕ ಗುರಿ | 24·000 ಲಕ್ಷ ರೂ·ಗಳು |

19) ವಿಶೇಷ ಘಟಕ ಯೋಜನೆ (ರಾಜ್ಯ) :

ಈ ಯೋಜನೆಯು ಬಿಜಾಪುರ, ಕೊಡಗು ಹಾಗೂ ಕೋಲಾರ ಜಿಲ್ಲೆಯಲ್ಲಿ ಮಾತ್ರ ಅನುಷ್ಠಾನಗೊಳಿಸಲಾಗುತ್ತಿದ್ದು, ಪರಿಶಿಷ್ಟಜಾತಿ ಜನರ ಜೀವನಾಭಿವೃದ್ಧಿಗಾಗಿ ಸಾಮಾಜಿಕ ಭದ್ರತಾ ನೆಡುತೋಪು, ಬಿದಿರು, ಅಸ್ತ್ರ ಒಲೆ, ಗೃಹ ನಿರ್ಮಾಣ ಸಾಮಗ್ರಿ ಪೂರೈಕೆ ಹಾಗೂ ಸಸಿ ಬೆಳೆಸುವಿಕೆಯು ಚಟುವಟಿಕೆಗಳ ಕಾರ್ಯವು ಒಳಗೊಂಡಿದೆ·

ಭೌತಿಕ ಗುರಿ:

| | |
|---|---|
| ನೆಡುತೋಪು ನಿರ್ವಹಣೆ | 17·5 ಹೆಕ್ಟೇರುಗಳು |
| ನೆಡುತೋಪು ನಿರ್ಮಾಣ | 81 ಹೆಕ್ಟೇರುಗಳು |
| ಮುಂಗಡ ಕೆಲಸ | 8 ಹೆಕ್ಟೇರುಗಳು |
| ಸಸಿ ಬೆಳೆಸುವಿಕೆ | 0·254 ಲಕ್ಷಗಳು |
| ಆರ್ಥಿಕ ಗುರಿ | 5·090 ಲಕ್ಷ ರೂ·ಗಳು |

20) ಗಿರಿಜನ ಉಪಯೋಜನೆ (ರಾಜ್ಯ):

ಚಿಕ್ಕಮಗಳೂರು, ದಕ್ಷಿಣ ಕನ್ನಡ, ಕೊಡಗು ಮತ್ತು ಮೈಸೂರು ಜಿಲ್ಲೆಯ ಅರಣ್ಯ ಪ್ರದೇಶಗಳ ಒಳಗೆ ಮತ್ತು ಅಸುಪಾಸಿನಲ್ಲಿ ವಾಸಿಸುತ್ತಿರುವ ಗಿರಿಜನರ ಕಲ್ಯಾಣಕ್ಕಾಗಿ ಈ ಯೋಜನೆಯನ್ನು ಹಮ್ಮಿಕೊಂಡಿದೆ· ಸಾಮಾಜಿಕ ಭದ್ರತಾ ನೆಡುತೋಪುಗಳನ್ನು ಬೆಳೆಸುವುದು, ಅಸ್ತ್ರ ಒಲೆ, ಗುಡಿಸಲು, ನಿರ್ಮಾಣಕ್ಕೆ ಮರಮುಟ್ಟುಗಳು ಮತ್ತು

ಚಾಪೆ, ಬುಟ್ಟಿ ಹಾಗೂ ಅಗರಬತ್ತಿ, ಕಡ್ಡಿ ತಯಾರಿಕೆಗೆ ಕಚ್ಚಾ ಸಾಮಾನು ಇತ್ಯಾದಿಗಳನ್ನು ಈ ಫಲಾನುಭವಿಗಳಿಗೆ ಪೂರೈಕೆ ಮಾಡುವುದೇ ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ.

<u>ಭೌತಿಕ ಗುರಿ:</u>

| | |
|---|---|
| ನೆಡುತೋಪು ನಿರ್ವಹಣೆ | 43.5 ಹೆಕ್ಟೇರುಗಳು |
| ನೆಡುತೋಪು ನಿರ್ಮಾಣ | 23 ಹೆಕ್ಟೇರುಗಳು |
| ಮುಂಗಡ ಕೆಲಸ | 10 ಹೆಕ್ಟೇರುಗಳು |
| ಸಸಿ ಬೆಳೆಸುವುದು | 0.360 ಲಕ್ಷಗಳು |
| ಫಲಾನುಭವಿಗಳು | 163 |
| ಆರ್ಥಿಕ ಗುರಿ | ರೂ. 8.200 ಲಕ್ಷಗಳು |

21) <u>ಸಮಗ್ರ ಅರಣ್ಯೀಕರಣ ಮತ್ತು ನಿಸರ್ಗ ಅಭಿವೃದ್ಧಿ ಯೋಜನೆ:</u>

ಈ ಯೋಜನೆಯನ್ನು ಶೇಕಡ 100 ರಷ್ಟು ಕೇಂದ್ರ ಸರ್ಕಾರದ ಅನುದಾನದಿಂದ ಬಳ್ಳಾರಿ, ತುಮಕೂರು, ಕೋಲಾರ ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಸಮಗ್ರ ಬಂಜರು ಭೂಮಿ ಅಭಿವೃದ್ಧಿ, ಕ್ಷೀಣಿತ ಅರಣ್ಯಗಳಲ್ಲಿ ಭೂಸಾರ ನೀರು ಸಂರಕ್ಷಣೆ, ಪರಿಸರ ಸಮತೋಲವನ್ನು ಕಾಯ್ದಿರಿಸುವುದು— ಈ ಯೋಜನೆಯ ಮುಖ್ಯ ಉದ್ದೇಶ ಸುಧಾರಿತ ಒಲೆಗಳು, ಜೈವಿಕ ಅನಿಲಗಳ ಅಳವಡಿಸುವಿಕೆಗಳೂ ಸಹ ಈ ಯೋಜನೆಯ ಪೂರಕ ಚಟುವಟಿಕೆಗಳಾಗಿವೆ.

<u>ಭೌತಿಕ ಗುರಿ:</u>

| | |
|---|---|
| ನೆಡುತೋಪು ನಿರ್ವಹಣೆ | 3616 ಹೆಕ್ಟೇರುಗಳು |
| ನೆಡುತೋಪು ನಿರ್ಮಾಣ | 5467 ಹೆಕ್ಟೇರುಗಳು |

| | |
|---|---|
| ಮುಂಗಡ ಕೆಲಸ | 4756 ಹೆಕ್ಟರುಗಳು |
| ಸಸಿ ಬೆಳೆಸುವುದು | 62.870 ಲಕ್ಷಗಳು |
| ಆರ್ಥಿಕ ಗುರಿ | 644.560 ರೂ.ಲಕ್ಷಗಳು |

ಬೆಂಗಳೂರು (ಗ್ರಾಮಾಂತರ), ಮೈಸೂರು, ಬೆಳಗಾಂ ಮತ್ತು ಹಾಸನ ಜಿಲ್ಲೆಗಳಲ್ಲೂ ಸಹ ಈ ಯೋಜನೆಯನ್ನು ಕೈಗೊಳ್ಳಲು ಉದ್ದೇಶಿಸಿದ್ದು ರೂ. 160.000 ಲಕ್ಷಗಳು ನಾಮ ಮಾತ್ರ ಅನುದಾನ ನಿಗಧಿಪಡಿಸಿದೆ. ಈ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಯೋಜನೆಯು ವ್ಯವಹಾರದ ಹಂತದಲ್ಲಿದೆ.

22) ಗಿರಿಜನ ಉಪಯೋಜನೆ (ಕೇಂದ್ರ):

ಚಿಕ್ಕಮಗಳೂರು, ದಕ್ಷಿಣ ಕನ್ನಡ, ಕೊಡಗು ಮತ್ತು ಮೈಸೂರು ಜಿಲ್ಲೆಯ ಅರಣ್ಯ ಪ್ರದೇಶಗಳ ಒಳಗೆ ಮತ್ತು ಆಸುಪಾಸಿನಲ್ಲಿ ವಾಸಿಸುತ್ತಿರುವ ಗಿರಿಜನರ ಕಲ್ಯಾಣಕ್ಕಾಗಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಸಾಮಾಜಿಕ ಭದ್ರತಾ ನೆಡುತೋಪುಗಳನ್ನು ಬೆಳೆಸುವುದು, ಅಸ್ತ್ರ ಒಲೆ, ಗುಡಿಸಲು ನಿರ್ಮಾಣಕ್ಕೆ ಮರಮುಟ್ಟುಗಳು, ಮತ್ತು ಚಾಪೆ, ಬುಟ್ಟಿ ಹಾಗೂ ಅಗರಬತ್ತಿ ಕಡ್ಡಿ ತಯಾರಿಕೆಗೆ ಬೇಕಾದ ಕಚ್ಚಾ ವಸ್ತುಗಳನ್ನು ಫಲಾನುಭವಿಗಳಿಗೆ ಪೂರೈಕೆ ಮಾಡುವುದೇ ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ.

ಭೌತಿಕ ಗುರಿ:

| | |
|---|---|
| ನೆಡುತೋಪು ನಿರ್ವಹಣೆ | 12.5 ಹೆಕ್ಟೇರುಗಳು |
| ನೆಡುತೋಪು ನಿರ್ಮಾಣ | 14 ಹೆಕ್ಟೇರುಗಳು |
| ಮುಂಗಡ ಕೆಲಸ | 18 ಹೆಕ್ಟೇರುಗಳು |
| ಸಸಿ ಬೆಳೆಸುವುದು | 8.103 ಲಕ್ಷಗಳು |
| ಫಲಾನುಭವಿಗಳು | 327 |

| | |
|---|---|
| ಆರ್ಥಿಕ ಗುರಿ | 19•900 ಲಕ್ಷ ರೂ•ಗಳು• |

23) <u>ವಿಶೇಷ ಘಟಕ ಯೋಜನೆ (ಕೇಂದ್ರ):</u>

ಪರಿಶಿಷ್ಟಜಾತಿ ಜನರ ಕಲ್ಯಾಣ ಕಾರ್ಯಕ್ರಮಗಳನ್ನು ಈ ಯೋಜನೆಯಡಿಯಲ್ಲಿ ಹಮ್ಮಿಕೊಳ್ಳಲಾಗಿದೆ• ಬಿಜಾಪುರ, ಬಳ್ಳಾರಿ, ಮೈಸೂರು ಮತ್ತು ತುಮಕೂರು ಜಿಲ್ಲೆಗಳನ್ನು ಹೊರತು ಪಡಿಸಿ ರಾಜ್ಯದ ಉಳಿದ ಜಿಲ್ಲೆಗಳಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ• ಸಾಮಾಜಿಕ ಭದ್ರತಾ ನೆಡುತೋಪು, ಬಿದಿರು, ಅಸ್ತ್ರಒಲೆ ಗೃಹ ನಿರ್ಮಾಣಕ್ಕೆ ಮರ ಮುಟ್ಟುಗಳ ಪೂರೈಕೆ ಹಾಗೂ ಸಸಿ ಬೆಳೆಸುವಿಕೆಯು ಚಟುವಟಿಕೆಗಳ ಕಾರ್ಯವು ಒಳಗೊಂಡಿದೆ•

<u>ಭೌತಿಕ ಗುರಿ:</u>

| | |
|---|---|
| ನೆಡುತೋಪು ನಿರ್ವಹಣೆ | 108•5 ಹೆಕ್ಟೇರುಗಳು |
| ನೆಡುತೋಪು ನಿರ್ಮಾಣ | 124 ಹೆಕ್ಟೇರಗಳು |
| ಮುಂಗಡ ಕೆಲಸ | 46•5 ಹೆಕ್ಟೇರುಗಳು |
| ಸಸಿ ಬೆಳೆಸುವುದು | 4•950 ಲಕ್ಷಗಳು |
| ಫಲಾನುಭವಿಗಳು | 574 |
| ಆರ್ಥಿಕ ಗುರಿ | 21•840 ಲಕ್ಷ ರೂ•ಗಳು |

24) <u>ನದಿಕಣಿವೆ ಯೋಜನೆಗಳಲ್ಲಿನ ಜಲಾನಯನ ಪ್ರದೇಶಗಳಲ್ಲಿ ಭೂಸಾರ ಸಂರಕ್ಷಣೆ ಯೋಜನೆ:-</u>

ಈ ಯೋಜನೆಯು ಬಳ್ಳಾರಿ ಹಾಗೂ ಧಾರವಾಡ ಜಿಲ್ಲೆಗಳಲ್ಲಿ ಹರಿಯುವ ತುಂಗಭದ್ರಾ ಜಲಾನಯನ ಪ್ರದೇಶ ಬೀದರ್ ಜಿಲ್ಲೆಯ ನಿಜಾಂಸಾಗರ ಹಾಗೂ ಗುಲಬರ್ಗ ಜಿಲ್ಲೆಯ ನಾಗಾರ್ಜುನ ಸಾಗರ ಜಲಾನಯನ ಪ್ರದೇಶದಲ್ಲಿ ಅರಣ್ಯೀಕರಣ

ಕಾಂತರ್ಗ ಕೈಗೊಳ್ಳುವ ಮೂಲಕ ಅನುಷ್ಠಾನಗೊಳಿಸಲಾಗುತ್ತಿದೆ.

ಭೌತಿಕ ಗುರಿ:

| | |
|---|---|
| ನೆಡುತೋಪು ನಿರ್ವಹಣೆ | 530 ಹೆಕ್ಟೇರಗಳು |
| ನೆಡುತೋಪು ನಿರ್ಮಾಣ | 443 ಹೆಕ್ಟೇರಗಳು |
| ಆರ್ಥಿಕ ಗುರಿ | 77.200 ಲಕ್ಷ ರೂ.ಗಳು |

ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ ರಾಜ್

ಯೋಜನೆಗಳು:-

25) ಜವಾಹರ ರೋಜಗಾರ ಯೋಜನೆ:-

ಗ್ರಾಮೀಣ ಪ್ರದೇಶದ ನಿರುದ್ಯೋಗಿ ಮತ್ತು ಅರೆ ಉದ್ಯೋಗಿ ಜನರಿಗೆ ಉದ್ಯೋಗವನ್ನು ಕಲ್ಪಿಸಿ ಗ್ರಾಮೀಣ ಸಮುದಾಯಕ್ಕೆ ಶಾಶ್ವತ ಆಸ್ತಿಯನ್ನು ನಿರ್ಮಿಸುವುದೇ ಈ ಯೋಜನೆಯ ಮುಖ್ಯ ಉದ್ದೇಶ, ಬಂಜರು ಭೂಮಿ ಅಭಿವೃದ್ಧಿ ಮತ್ತು ರಸ್ತೆಬದಿ, ಕೆರೆ ಅಂಗಳ ಹಾಗೂ ಕ್ಷೀಣತ ಅರಣ್ಯ ಪ್ರದೇಶದಲ್ಲಿ ನೆಡುತೋಪುಗಳನ್ನು ಬೆಳೆಸುವುದು ಶ್ರಮಿಕ ಕಾರ್ಮಿಕರಿಗೆ ಕೂಲಿಯ ಒಂದು ಅಂಶವನ್ನು ಆಹಾರ ಧಾನ್ಯ ರೂಪದಲ್ಲಿ ನೀಡಲಾಗುತ್ತಿದೆ.

ಭೌತಿಕ ಗುರಿ:

| | |
|---|---|
| ನೆಡುತೋಪು ನಿರ್ವಹಣೆ | 7087 ಹೆಕ್ಟೇರುಗಳು |
| ನೆಡುತೋಪು ನಿರ್ಮಾಣ | 4013 ಹೆಕ್ಟೇರುಗಳು |
| ಮುಂಗಡ ಕೆಲಸ | 2809 ಹೆಕ್ಟೇರುಗಳು |
| ಸಸಿ ಬೆಳೆಸುವುದು | 52.060 ಲಕ್ಷಗಳು |
| ಆರ್ಥಿಕ ಗುರಿ | ರೂ.650.512 ಲಕ್ಷಗಳು. |

26) <u>ಬರ ಪೀಡಿತ ಪ್ರದೇಶ ಕಾರ್ಯಕ್ರಮದ ಯೋಜನೆ:</u>

ಈ ಯೋಜನೆಯನ್ನು ರಾಜ್ಯದ 11 ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಭೂಮಿ ಉತ್ಪತ್ತಿ, ನೀರು, ಜಾನುವಾರು ಹಾಗೂ ಮಾನವ ಸಂಪನ್ಮೂಲಗಳ ಮೇಲೆ ಬರಗಾಲದ ಪ್ರತಿಕೂಲ ಪರಿಣಾಮಗಳನ್ನು ಕಡಿಮೆಗೊಳಿಸುವ ಸಲುವಾಗಿ, ನೈಸರ್ಗಿಕ ಸಂಪನ್ಮೂಲಗಳನ್ನು ಸಮಗ್ರ ಅಭಿವೃದ್ಧಿ ಪಡಿಸುವುದೇ ಈ ಯೋಜನೆಯ ಮುಖ್ಯ ಗುರಿ. ಅರಣ್ಯೀಕರಣ ಮತ್ತು ಮೇವು ಹುಲ್ಲು ಉತ್ಪಾದನೆಯು ಈ ಯೋಜನೆಯ ಒಂದು ಮುಖ್ಯ ಅಂಗ.

<u>ಭೌತಿಕ ಗುರಿ:</u>

| | |
|---|---|
| ನೆಡುತೋಪು ನಿರ್ವಹಣೆ | 4305 ಹೆಕ್ಟೇರುಗಳು |
| ನೆಡುತೋಪು ನಿರ್ಮಾಣ | 4212 ಹೆಕ್ಟೇರುಗಳು |
| ಮುಂಗಡ ಕೆಲಸ | 4449 ಹೆಕ್ಟೇರುಗಳು |
| ಸಸಿ ಬೆಳೆಸುವುದು | 60.020 ಲಕ್ಷಗಳು |
| ಆರ್ಥಿಕ ಗುರಿ | ರೂ. 539.970 ಲಕ್ಷಗಳು |

27) <u>ಪಶ್ಚಿಮ ಘಟ್ಟ ಪ್ರದೇಶದಲ್ಲಿ ಸಮಗ್ರ ಅರಣ್ಯ ಅಭಿವೃದ್ಧಿ ಯೋಜನೆ:</u>

ಪಶ್ಚಿಮ ಘಟ್ಟ ಪ್ರದೇಶ ಹೊಂದಿರುವ ರಾಜ್ಯದ 9 ಜಿಲ್ಲೆಗಳಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಯೋಜನೆಯ ಮುಖ್ಯ ಉದ್ದೇಶ ಗ್ರಾಮೀಣ ಜನರ ಕನಿಷ್ಠ ಅಗತ್ಯಗಳಾದ ಮರ ಮುಟ್ಟು, ಉರುವಲು ಸೌದೆ ಹಾಗೂ ಮೇವು ಹುಲ್ಲು ಇವುಗಳನ್ನು ಪೂರೈಸುವುದು. ಪರಿಸರ ಸಂರಕ್ಷಣೆ ಮತ್ತು ಸಮಗ್ರ ಅರಣ್ಯ ಅಭಿವೃದ್ಧಿ ಕೈಗೊಳ್ಳುವ ಮೂಲಕ ಅರಣ್ಯ

ಸಂಪನ್ಮೂಲಗಳ ಇಳುವರಿ ಸಮಾಜದ ದುರ್ಬಲ ವರ್ಗದವರಿಗೆ, ಆದ್ಯತೆ ಮೇರೆಗೆ ದೊರಕುವಂತೆ ಮಾಡುವುದೇ ಯೋಜನೆಯ ಒಂದು ಮುಖ್ಯ ಅಂಶವಾಗಿದೆ.

ಭೌತಿಕ ಗುರಿ:

| | |
|---|---|
| ನೆಡುತೋಪು ನಿರ್ವಹಣೆ : | 2787 ಹೆಕ್ಟೇರುಗಳು |
| ನೆಡುತೋಪು ನಿರ್ಮಾಣ | 1338 ಹೆಕ್ಟೇರುಗಳು |
| ಮುಂಗಡ ಕೆಲಸ | 1534 ಹೆಕ್ಟೇರುಗಳು |
| ಸಸಿ ಬೆಳೆಸುವುದು | 36.480 ಲಕ್ಷಗಳು |
| ಆರ್ಥಿಕ ಗುರಿ | ರೂ.275.292 ಲಕ್ಷಗಳು |

28) ಪೂರ್ವಪ್ರಸ್ಥ ಭೂಮಿಯುತಲ್ಲ ಅರಣ್ಯ ಮತ್ತು ಪರಿಸರ ಯೋಜನೆ:

ರಾಜ್ಯ ವಲಯದಡಿ ಇದೊಂದು ಹೊಸ ಯೋಜನೆಯಾಗಿದ್ದು ಜರ್ಮನಿ ದೇಶದ ಆರ್ಥಿಕ ಸಹಾಯದೊಂದಿಗೆ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಉದ್ದೇಶಿಸಿದ್ದು, ಯೋಜನೆಯ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಮಂಜೂರಾತಿಗಾಗಿ ಸಲ್ಲಿಸಿದೆ. ಮೊದಲ ಹಂತದಲ್ಲಿ ರಾಜ್ಯದ ಮೈಸೂರು,ಹಾಸನ, ಚಿಕ್ಕಮಗಳೂರು ಬೆಂಗಳೂರು,ಕೋಲಾರ ಮತ್ತು ತುಮಕೂರು ಜಿಲ್ಲೆಗಳಲ್ಲಿ ಕಾರ್ಯಗತಗೊಳಿಸಲು ಉದ್ದೇಶಿಸಿದ್ದು, ಅನಂತರ ಧಾರವಾಡ, ಬೆಳಗಾಂ, ಬಿಜಾಪುರ ಜಿಲ್ಲೆಗಳಿಗೂ ವಿಸ್ತರಿಸಲಾಗುವುದು. ನೈಸರ್ಗಿಕ ಅರಣ್ಯ ರಕ್ಷಣೆ, ಗ್ರಾಮೀಣ ಜನರಿಗೆ ಅರಣ್ಯ ಉತ್ಪನ್ನಗಳನ್ನು ಒದಗಿಸಿ ಗುಡಿ ಕೈಗಾರಿಕೆಗಳನ್ನು ಬೆಂಬಲಿಸುವುದೂ ಅಲ್ಲದೆ, ಅರಣ್ಯೀಕರಣ ಹಾಗೂ ಸಂಬಂಧಿಸಿದ ಕಾರ್ಯಚಟುವಟಿಕೆಗಳಿಂದ ಗ್ರಾಮೀಣ ಜನರಿಗೆ ಉದ್ಯೋಗಾವಕಾಶ ಕಲ್ಪಿಸಿ, ಅವರುಗಳ ಆದಾಯವನ್ನು ಹೆಚ್ಚಿಸುವುದರ ಮೂಲಕ ಬಡತನ, ನಿರ್ಮೂಲನೆಗೆ ಒತ್ತುಕೊಡುವುದು ಯೋಜನೆಯ ಗುರಿಯಾಗಿದೆ. 1994-95 ರ ಸಾಲಿಗೆ ನಾಮಮಾತ್ರ ಅನುದಾನವಾಗಿ ರೂ. 10.000 ಲಕ್ಷಗಳನ್ನು

ನಿಗದಿಪಡಿಸಲಾಗಿದೆ.

29) ಡ್ಯಾನಿಡಾ ಸಹಾಯದ ಸಮಗ್ರ ಗ್ರಾಮೀಣ ನೈರ್ಮಲ್ಯ ಮತ್ತು ನೀರು ಸರಬರಾಜು ಯೋಜನೆ:

ಅಂತರ್ಜಲ ನೀರಿನ ಮಟ್ಟವನ್ನು ಸುಧಾರಿಸಲು, ಭೂ ಸವೆತ ಹಾಗೂ ಕೆರೆಗಳ ಕೊರೆತವನ್ನು ತಡೆಗಟ್ಟಲು ಕೆರೆ ಅಂಗಳಗಳಲ್ಲಿ ಹಾಗೂ ಜಲ ಕೇಂದ್ರಗಳಲ್ಲಿ ನೆಡುತೋಪು ನಿರ್ಮಾಣ ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ.

ಪ್ರಸಕ್ತ ಸಾಲಿನಲ್ಲಿ (1994-95) ರಾಜ್ಯದ ಬಿಜಾಪುರ ಜಿಲ್ಲೆಯ ಹುನಗುಂದ ತಾಲ್ಲೂಕಿನಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.

| ಭೌತಿಕ ಗುರಿ: | | ಸಾಧನೆ. |
|---|---|---|
| ನೆಡುತೋಪು ನಿರ್ವಹಣೆ | 195 ಹೆಕ್ಟೇರುಗಳು | — |
| ನೆಡುತೋಪು ನಿರ್ಮಾಣ | 60 ಹೆಕ್ಟೇರುಗಳು | 60 ಹೆಕ್ಟೇರ್ |
| ಆರ್ಥಿಕ ಗುರಿ | ರೂ.7.820 ಲಕ್ಷಗಳು | 6.854 ಲಕ್ಷ ರೂ. |

30) ತರಬೇತಿ ವಿವರ:

1-4-94 ರಿಂದ 31-12-94ರ ವರೆಗೆ ಕಾಡುಗೋಡಿ ಹಾಗೂ ತಟ್ಟಿಹಳ್ಳಿ ಸಾಮಾಜಿಕ ಅರಣ್ಯ ತರಬೇತಿ ಕೇಂದ್ರದಲ್ಲಿ ತರಬೇತಿ ಪಡೆದವರ ವಿವರ:

| ಕ್ರ.ಸಂ, ಹುದ್ದೆ | ಕಾಡುಗೋಡಿ ತರಬೇತಿ ಕೇಂದ್ರ | ತಟ್ಟಿಹಳ್ಳಿ ತರಬೇತಿ ಕೇಂದ್ರ |
| --- | --- | --- |
| 1) ಲಿಪಿಕ ನೌಕರರು | 36 | — |
| 2) ವಾಹನ ಚಾಲಕರು | 136 | — |
| 3) ಅರಣ್ಯ ರಕ್ಷಕರು | — | 26 |
| 4) ವನಪಾಲಕರು | — | 15 |

## 31 ಇತರ ಕಾರ್ಯಕ್ರಮಗಳು

### ಅರಣ್ಯ ಸಂರಕ್ಷಣೆ:-

ಕರ್ನಾಟಕದ ಅಧಿನಿಯಮದಲ್ಲಿ ಅಧಿಕಾರಿಗಳು ಮತ್ತು ದಂಡಗಳ ಬಗ್ಗೆ ಉಪಬಂಧ ಕಲ್ಪಿಸಲಾಗಿದೆ. ಬೇಟೆ, ಶ್ರೀಗಂಧದ ಮೊದಲಾದವುಗಳ ಕಳ್ಳ ಸಾಗಾಣಿಕೆಯನ್ನು ಪತ್ತೆ ಹಚ್ಚಲು 23 ಸಂಚಾರಿ ತಂಡಗಳು ಹಗಲಿರುಳು ಕೆಲಸ ಮಾಡುತ್ತಿವೆ. ಅರಣ್ಯದ ಮುಖ್ಯ ಕಡೆಗಳಲ್ಲಿ 161 ತಪಾಸಣಾ ಕೇಂದ್ರಗಳಿದ್ದು ಸಿಬ್ಬಂದಿಗಳಿಗೆ ಬಂದೂಕುಗಳನ್ನು ಸಹ ಒದಗಿಸಲಾಗಿದೆ. ರಾಜ್ಯದ ಅರಣ್ಯಗಳಲ್ಲಿ ಆನೆಗಳ ಅತಿಕ್ರಮಣ ಗಂಧದ ಮರಗಳ ಕಳ್ಳ ಸಾಗಾಣಿಕೆ ಮತ್ತಿತರ ಅಕ್ರಮ ಕಾರ್ಯಾಚರಣೆಯನ್ನು ತಡೆಗಟ್ಟಲು ತಮಿಳುನಾಡು ಮತ್ತು ಕೇರಳ ಗಡಿ ಪ್ರದೇಶಗಳಲ್ಲಿ 3[illegible]3 ನಿಗದಿತ ಮತ್ತು 170 ಸಂಚಾರಿ ವೈರ್‌ಲೆಸ್ ಸೆಟ್ ವ್ಯವಸ್ಥೆಯನ್ನು ಮಾಡಲಾಗಿದೆ. 500 ವಾಕಿಟಾಕಿಗಳೂ ಸಹ ಕಾರ್ಯ ನಿರ್ವಹಿಸುತ್ತಿವೆ. ಇದಲ್ಲದೆ, 100ವ್ಯಾಟ್ ಹೈ ಫ್ರೀಕ್ವೆನ್ಸಿಯ 9 ಸೆಟ್ಟುಗಳನ್ನು ಸರಬರಾಜು ಮಾಡಲಾಗಿದೆ.

## ಉರುವಲು ಕಟ್ಟಿಗೆ ಬೊಂಬು ಮತ್ತು ಶ್ರೀಗಂಧ ಒದಗಿಸುವುದು:

ಇಲಾಖೆಯು 3 ರಿಂದ 4 ಲಕ್ಷ ಟನ್ನುಗಳಷ್ಟು ಉರುವಲು ಸೌದೆಯನ್ನು ಪಡೆದರೆ ಗ್ರಾಮೀಣ ಜನತೆ ಪಡೆಯುವ ಉರುವಲು ಸೌದೆಯು 35 ರಿಂದ 40 ಲಕ್ಷ ಟನ್ನುಗಳಷ್ಟಾಗಿದೆ. ಮನಸ್ಸಿಗೆ ಬಂದಂತೆ ಅರಣ್ಯಗಳಲ್ಲಿ ಉರುವಲು ಸೌದೆ ಕಡಿಯುವುದನ್ನು ತಪ್ಪಿಸಲು ಸರ್ಕಾರವು ಮಲೆನಾಡಿನ ಜನತೆಗೆ ಸಹಾಯಕವಾದ ಬೆಲೆಗಳಲ್ಲಿ ಉರುವಲು ಸೌದೆಯನ್ನು ಸರಬರಾಜು ಮಾಡುವ ತತ್ವವನ್ನು ಅನುಸರಿಸುತ್ತಿದೆ. ದಿನಾಂಕ 1-9-1992 ರಿಂದ ಉರುವಲು ಕಟ್ಟಿಗೆಯ ದರವನ್ನು ಪುನರ್ವಿಮರ್ಶಿಸುವಾಗ, ಮಲೆನಾಡಿನ ಪಟ್ಟಣ ಪ್ರದೇಶಗಳಿಗೆ ಪ್ರತಿ ಟನ್ನಿಗೆ ರೂ 60.00 ಹಾಗೂ ಬಯಲು ಸೀಮೆಯ ಪ್ರದೇಶಗಳಿಗೆ ಪ್ರತಿ ಟನ್ನಿಗೆ ರೂ. 170.00 ನಿಗದಿ ಪಡಿಸಿದಾಗ್ಯೂ ಗ್ರಾಮೀಣ ಮಲೆನಾಡು ಪ್ರದೇಶಕ್ಕೆ ಪ್ರತಿ ಟನ್ನಿಗೆ ರೂ 25.00 ರಂತೆ ನಿಗದಿ ಪಡಿಸಲಾಗಿದೆ. ಹಾಗೆಯೇ ಬೊಂಬು ಸರಬರಾಜಿನಲ್ಲಿ ಕೈಗಾರಿಕೆಗಳಿಂದ, ಸಂಸ್ಥೆಗಳಿಂದ ಪಡೆಯುವ ಶೇಕಡ 50 ರಷ್ಟನ್ನು ಮೇದಾರರು ಮತ್ತು ಗುಡಿ ಕೈಗಾರಿಕೆಗಳಿಂದ ಪಡೆಯಲಾಗುತ್ತದೆ. ಶೇಕಡ 75 ರಷ್ಟಿನ ಸಹಾಯ ಧನದ ಮೂಲಕ ಗುಡಿ ಕೈಗಾರಿಕೆಗಳಿಗೆ ಗಂಧದ ಮರವನ್ನು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಮೂಲಕ ಸರಬರಾಜು ಮಾಡಲಾಗುತ್ತದೆ.

32) ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ

ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತವು 1958 ರ ಕಂಪನಿಗಳ ಅಧಿನಿಯಮದ ಮೇರೆಗೆ 1971ರಲ್ಲಿ ಒಂದು ಕಂಪನಿಯಾಗಿ ರೂಪಗೊಂಡು ಈ ಕೆಳಗಿನ ಉದ್ದೇಶವನ್ನು ಹೊಂದಿದೆ. ಕೈಗಾರಿಕೆಗಳಿಗೆ ಬೇಕಾಗುವ ಕಚ್ಚಾವಸ್ತುಗಳನ್ನು ಒದಗಿಸಲು ನೀಲಗಿರಿ, ರಬ್ಬರ್, ಕೋಕೋ

ಮುಂತಾದ ನೆಡುತೋಪುಗಳನ್ನು ಬೆಳೆಸುವುದು. ನಿಗಮದ ಅಧಿಕೃತ ಷೇರು ಬಂಡವಾಳ 2.00 ಕೋಟಿ ರೂಪಾಯಿಗಳಾಗಿದ್ದು ಅದನ್ನು 1981-82ರಲ್ಲಿ 10.00 ಕೋಟಿ ರೂಪಾಯಿಗಳಿಗೆ ಹೆಚ್ಚಿಸಿದ್ದು, 1986-87ರಲ್ಲಿ 25.00 ಕೋಟಿ ರೂಪಾಯಿಗಳಾಗಿದ್ದಿತು. ಇದರಲ್ಲಿ ಪಾವತಿಯಾದ ಬಂಡವಾಳ 840.32 ಲಕ್ಷ ರೂ.ಗಳು.

ಅ) <u>ನೀಲಗಿರಿ ನೆಡುತೋಪುಗಳು:</u>

1) ನಿಗಮವು ಸಾಂಸ್ಥಿಕ ಹಣಕಾಸು ಯೋಜನೆಯಡಿ ಆರ್ಥಿಕ ಸಾಲ ಪಡೆದು ಇದುವರೆಗೆ 52926 ಹೆಕ್ಟೇರುಗಳಷ್ಟು ನೀಲಗಿರಿ ನೆಡುತೋಪುಗಳನ್ನು ಬೆಳೆಸಿದೆ. ಹಾಗೂ ಈ ನೆಡುತೋಪುಗಳಿಂದ ನಿಗಮವು 1982-83ನೇ ಸಾಲಿನಿಂದ ಪಲ್ಪ್‌ವುಡ್ ಇಳುವರಿ ಪಡೆಯುತ್ತಿದೆ.

2) ಸರ್ಕಾರದ ಆದೇಶದ ಸಂಖ್ಯೆ:ಎಫ್‌ಎಫ್‌ಡಿ:12:ಎಫ್‌ಎಪಿ:71 ದಿ:2-7-76 ಮತ್ತು ಎಹೆಚ್‌ಎಫ್‌ಎಫ್:93ಎಫ್‌ಪಿಸಿ:77, ದಿನಾಂಕ 10-4-1987ರ ಮೂಲಕ ಇಲಾಖೆಯು 1971 ರವರೆಗೆ ಬೆಳೆಸಿದ ನೀಲಗಿರಿ ನೆಡುತೋಪುಗಳ ಪೈಕಿ, ಜುಲೈ 1976ರಲ್ಲಿ 34800 ಹೆಕ್ಟೇರಿನಷ್ಟು ನೀಲಗಿರಿ ನೆಡುತೋಪುಗಳನ್ನು ನಿಗಮಕ್ಕೆ ನಿರ್ವಹಣೆಗಾಗಿ ಮತ್ತು ಅಭಿವೃದ್ಧಿಗಾಗಿ ವರ್ಗಾಯಿಸಲು ಆದೇಶಿಸಿದ್ದು, ಅದರ ಪೈಕಿ, ನಿಗಮವು ಇದುವರೆಗೆ 16665 ಹೆಕ್ಟೇರಿನಷ್ಟು ಕ್ಷೇತ್ರವನ್ನು ಮಾತ್ರ ಪಡೆದಿದ್ದು ಇನ್ನೂ 18135 ಹೆಕ್ಟೇರ ಕ್ಷೇತ್ರ ಬೆಂಗಳೂರು ಮತ್ತು ಕೋಲಾರ ವಿಭಾಗಗಳಿಂದ ಪಡೆಯಬೇಕಾಗಿದೆ.

3) ನಿಗಮದ ಹಾಗೂ ಇಲಾಖೆಯಿಂದ ವರ್ಗಾಯಿಸಲ್ಪಟ್ಟ ನೆಡುತೋಪುಗಳಿಂದ 1994-95ನೇ ಸಾಲಿನಲ್ಲಿ ಅಂದರೆ 1-4-94 ರಿಂದ 31-12-94ರ ವರೆಗೆ 42,549 ಮೆ.ಟನ್‌ಗಳಷ್ಟು ನೀಲಗಿರಿ ಪಲ್ಪವುಡ್ ಕಚ್ಚಾ ವಸ್ತುಗಳನ್ನು ಮಾರಾಟ ಮಾಡಿ 285.62 ಲಕ್ಷ ರೂ.ಗಳ ಆದಾಯ ಪಡೆದಿದೆ.

ಆ) <u>ಕೋಕೋ ಕಾರ್ಯಕ್ರಮ:</u>

ನಿಗಮವು 1672 ಹೆಕ್ಟೇರ ಕೋಕೋ ನೆಡುತೋಪುಗಳನ್ನು ನಿರ್ವಹಣೆ, ಉತ್ಪನ್ನ ತೆಗೆಯುವಿಕೆ ಹಾಗೂ ಅಭಿವೃದ್ಧಿಪಡಿಸಲು ಕ್ಯಾಂಕೋ ಸಂಸ್ಥೆಗೆ ಗುತ್ತಿಗೆ ಆಧಾರದ ಮೇಲೆ 30-4-1984ರಿಂದ 20 ವರ್ಷದ ಅವಧಿಗೆ ವಹಿಸಲಾಗಿತ್ತು. 10 ವರ್ಷದ ಅವಧಿಗೆ ಕ್ಯಾಂಕೋ ಸಂಸ್ಥೆಯು ನಿಗಮಕ್ಕೆ 55 ಲಕ್ಷ ರೂಪಾಯಿಗಳ ಶುಲ್ಕ ನೀಡುವುದು ಹಾಗೂ ಮುಂದಿನ 10 ವರ್ಷಗಳಿಗೆ 150 ಲಕ್ಷ ರೂಪಾಯಿಗಳನ್ನು ನೀಡುವುದೆಂದು ನಿಗದಿಗೊಳಿಸಲಾಗಿತ್ತು. ಕ್ಯಾಂಕೋನವರು ಸದರಿ ನೆಡುತೋಪುಗಳನ್ನು ಆದಾಯಕರವಾಗಿ ನಡೆಸಲು ಸಾಧ್ಯವಾಗದೇ ಇರುವುದರಿಂದ, ನಿಗಮಕ್ಕೆ ವಾಪಸ್ಸು ತೆಗೆದುಕೊಳ್ಳಲು ಕೇಳಿರುವುದರ ಮೇರೆಗೆ ಸರ್ಕಾರವು ತನ್ನ ದಿ: 29-6-92ರ ಆದೇಶದಲ್ಲಿ ಸದರಿ ಕೋಕೋ ನೆಡುತೋಪುಗಳನ್ನು ನಿಗಮವು ಪಡೆದು ಅರಣ್ಯ ಇಲಾಖೆಗೆ ವಾಪಸ್ಸು ವರ್ಗಾಯಿಸಲು ನಿರ್ದೇಶಿಸಿತ್ತು. ಅದರಂತೆ ಎಲ್ಲಾ ಕೋಕೋ ನೆಡುತೋಪುಗಳನ್ನು ಮೆ: ಕ್ಯಾಂಕೋ ಅವರಿಂದ ನಿಗಮವು ಪಡೆದು ಹಾಗೆಯೇ ಅರಣ್ಯ ಇಲಾಖೆಗೆ ಏಪ್ರಿಲ್ 1994ರಲ್ಲಿ ವರ್ಗಾಯಿಸಲಾಗಿದೆ. ಈ ಯೋಜನೆಯನ್ನು ನಿಗಮವು ಕಾರ್ಯಗತಗೊಳಿಸಿದ ಸಮಯದಲ್ಲಿ ನಿಗಮಕ್ಕೆ

ಆದಂತ ಆಪರೇಶನಲ್ ಲಾಸ್ ರೂ.66.70 ಲಕ್ಷ ಮೊತ್ತವು ಇನ್ನೂ ಸರ್ಕಾರದಿಂದ ಬರಬೇಕಾಗಿದೆ.

ಇ) ರಬ್ಬರ್ ಕಾರ್ಯಕ್ರಮ:

ದಿನಾಂಕ 1-71981ರಿಂದ ಅರಣ್ಯ ಇಲಾಖೆಯಿಂದ 4443 ಹೆಕ್ಟೇರ್ ಸರ್ಕಾರದ ರಬ್ಬರ್ ನೆಡುತೋಪುಗಳನ್ನು ನಿಗಮವು ಗುತ್ತಿಗೆ ಮೇರೆಗೆ 20 ವರ್ಷಗಳಿಗೆ ಪಡೆದು ವಾಣಿಜ್ಯ ಹಾದಿಯಲ್ಲಿ ನಿರ್ವಹಿಸುತ್ತಿದೆ. ಸಮಂಜಸವಾಗಿ 3500 ಹೆಕ್ಟೇರಿನ ಪ್ರದೇಶದಲ್ಲಿ ರಸವನ್ನು ಪಡೆಯಲಾಗುತ್ತಿದೆ. 1994-95ರಲ್ಲಿ (31-12-94ರವರೆಗೆ) 2589 ಮೆಟ್ರಿಕ್ ಟನ್ ಒಣ ರಬ್ಬರನ್ನು ಪಡೆಯಲಾಗಿದೆ ಹಾಗೂ ಇದರಿಂದ ರೂ.908.00 ಲಕ್ಷ ರೂ.ಗಳ ಆದಾಯ ಪಡೆಯಲಾಗಿದೆ.

ಈ) ರಬ್ಬರ್ ನೆಡುತೋಪು ಪುನರ್ ನಿರ್ಮಾಣ -ಯೋಜನೆ:

ರಬ್ಬರ್ ಬೋರ್ಡ್‌ನೊಡನೆ ಸಮಾಲೋಚಿಸಿ ಅರಣ್ಯ ಇಲಾಖೆಯಿಂದ ವರ್ಗಾಯಿಸಿ ಪಡೆದಿದ್ದ 4443 ಹೆಕ್ಟೇರ್ ಪೈಕಿ ಸುಮಾರು 311 ಹೆ. ಕ್ಷೇತ್ರದಲ್ಲಿ ರಬ್ಬರ್ ಪುನರ್ ನಾಟಿಕೆ ಮಾಡಲು ರೂ.146.78 ಲಕ್ಷ ಮೊತ್ತಕ್ಕೆ ಮಂಜೂರಾತಿಯನ್ನು ಸರ್ಕಾರ ಮತ್ತು ನಬಾರ್ಡ್ ಸಂಸ್ಥೆಯಿಂದ ಪಡೆಯಲಾಗಿದ್ದು, ಈ ಪ್ರಾಯೋಜನೆಯನ್ನು 1993-94ರಲ್ಲಿ ನರ್ಸರಿ ಸಸಿಗಳನ್ನು ಬೆಳೆಸಲು ಕ್ರಮ ಕೈಗೊಂಡಿದ್ದು, ಇವುಗಳನ್ನು 1995ನೇ ಮತ್ತು 1996ನೇ ಸಾಲಿನಲ್ಲಿ ನೆಡುತೋಪು ನಿರ್ಮಾಣ ಮಾಡಲು ಉಪಯೋಗಿಸಲಾಗುವುದು.

ಉ) <u>ಭಾರತದ ವನ್ಯ ಪ್ರಾಣಿ ಪ್ರದೇಶ:</u>

(ವೈಲ್ಡ್ ಲ್ಯಾಂಡ ಇಂಡಿಯಾ) ನಾಗರಹೊಳೆ ರಾಷ್ಟ್ರೀಯ ಉದ್ಯಾನವನಕ್ಕೆ, ಭೇಟಿ ನೀಡುವ ಪ್ರವಾಸಿಗಳಿಗೆ ಅನುಕೂಲಕ್ಕಾಗಿ ಅಲ್ಲಿ ತಂಗಲು ಬೇಕಾದ ಅನುಕೂಲಗಳು ಹಾಗೂ ಇತರ ವಿನೋದಗಳೊಡನೆ ನಾಗರ ಹೊಳೆಯ ಮುರ್ಕಲ್ ಹತ್ತಿರ ಪ್ರವಾಸಿ ಮಂದಿರವನ್ನು ನಿಗಮವು ನಿರ್ಮಿಸಿತ್ತು. ಈ ನಿರ್ಮಾಣಕ್ಕೆ ನಿಗಮವು ಸುಮಾರು 185 ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಲಾಗಿತ್ತು. ಸರ್ಕಾರವು ತನ್ನ ಆದೇಶದ ಸಂಖ್ಯೆ:ಎಫ್ಇಇ:61:ಎಫ್‌ಸಿಸಿ:93 ದಿನಾಂಕ 30-8-93ರ ಮೂಲಕ ಸದರಿ ಸಂಕೀರ್ಣವನ್ನು ಇಲಾಖೆಗೆ ವರ್ಗಾಯಿಸಲು ಆದೇಶ ಹೊರಡಿಸಿದಂತೆ ಜನವರಿ 1994ರಲ್ಲಿ ಇಲಾಖೆಗೆ ವರ್ಗಾಯಿಸಲಾಯಿತು. ಇದಕ್ಕೆ ನಿಗಮದಿಂದ ವೆಚ್ಚವಾದ ರೂ. 185 ಲಕ್ಷಗಳನ್ನು ಅರಣ್ಯ ಇಲಾಖೆಯು ನಿಗಮಕ್ಕೆ ನೀಡಬೇಕೆಂದು ಸರ್ಕಾರ ಆದೇಶ ಹೊರಡಿಸಿದ್ದು ಈ ಮೊತ್ತ ಕರ್ನಾಟಕ ಅರಣ್ಯ ಇಲಾಖೆಯಿಂದ ಇನ್ನೂ ಬರಬೇಕಾಗಿದೆ.

ಊ) <u>ಬೆಂಗಳೂರು-ಮಲ್ಲೇಶ್ವರಂದಲ್ಲಿ ಕಚೇರಿ ಕಟ್ಟಡ:</u>

ನಿಗಮವು ಸುಮಾರು 140.00 ಲಕ್ಷ ರೂ. ವೆಚ್ಚದಲ್ಲಿ ಅರಣ್ಯ ಭವನದ ಆವರಣದಲ್ಲಿ 'ವನ ವಿಕಾಸ' ಎಂಬ ಮಹಡಿ ಕಚೇರಿ ಕಟ್ಟಡವನ್ನು ನಿರ್ಮಾಣ ಮಾಡಿದೆ. ಕಳೆದ ಜನವರಿ 1990ರಿಂದ ಲೂ ಅರಣ್ಯ ಅಭಿವೃದ್ಧಿ ನಿಗಮ, ರಾಜ್ಯ ಅರಣ್ಯ ಕೈಗಾರಿಕೆ ನಿಗಮ, ಮತ್ತು ಅರಣ್ಯ ಇಲಾಖೆಯ ಸಂಶೋಧನೆ ವಿಂಗು ಮತ್ತಿತರೆ ಕಚೇರಿಗಳು ಕಾರ್ಯ ನಿರ್ವಹಿಸುತ್ತಿವೆ.

ಋ) <u>ಟೀ ನೆಡುತೋಪು:</u>

ನಿಗಮವು ಕೊಡಗು ಜಿಲ್ಲೆಯಲ್ಲಿ ಮರವಿಲ್ಲದೆ ಇರುವಂತಹ ಗಾಳಿಬೀಡು ಪ್ರದೇಶದಲ್ಲಿ 1989ರ ವೇಳೆಗೆ ಸುಮಾರು 42 ಹೆಕ್ಟೇರ ಟೀ ನೆಡುತೋಪುಗಳನ್ನು ಮತ್ತು ಕಾರ್ಮಿಕರಿಗಾಗಿ 100 ಮನೆಗಳನ್ನು ನಿರ್ಮಿಸಿದೆ. ಅರಣ್ಯ ಇಲಾಖೆ ಬೆಳೆಸಿ ನಿಗಮಕ್ಕೆ ವರ್ಗಾಯಿಸಿದ 13.90 ಹೆಕ್ಟೇರ ಟೀ ನೆಡುತೋಪುಗಳೊಂದಿಗೆ ತಾನೇ ಬೆಳೆಸಿದ 42 ಹೆಕ್ಟೇರ ನೆಡುತೋಪಿನ ನಿರ್ವಹಣೆಯನ್ನು ಮುಂದುವರಿಸಲಾಗಿದೆ. ಸರ್ಕಾರದ ನಿರ್ದೇಶನದಂತೆ ಈ ಟೀ ನೆಡುತೋಪುಗಳನ್ನು 15 ವರ್ಷಗಳ ಅವಧಿಗೆ ಮೇ: ಕಾಂತಿಲಾಲ ಆರ ಜೋರಾಡಿಯ ಎಂಬುವವರಿಗೆ ಗುತ್ತಿಗೆ ಆಧಾರದ ರೀತ್ಯ ಪರವಾನಗಿಗಳನ್ನು ನೀಡಲ್ಪಟ್ಟಿದೆ.

ಸರ್ಕಾರದ ಆದೇಶದ ಸಂಖ್ಯೆ:ಎಹೆಚ್ಎಫ್ಎಫ್:170:ಎಫ್ಎಸಿ:90, ದಿನಾಂಕ 13—7—1992ರಂತೆ ಅರಣ್ಯ ಇಲಾಖೆಯಿಂದ ನಿಗಮಕ್ಕೆ ವರ್ಗಾಯಿಸಲ್ಪಟ್ಟ ಸುಮಾರು 2096 ಹೆ. ಕ್ಷೇತ್ರದ ಪೈಕಿ 55.9 ಹೆ. ಟೀ ನೆಡುತೋಪುಗಳನ್ನು ಹೊರತು ಪಡಿಸಿ ಇನ್ನುಳಿದ ಕ್ಷೇತ್ರಗಳಲ್ಲಿ ಪರ್ಯಾಯ ಬೆಳೆಯುವ ಸಲುವಾಗಿ ಎರಡು ಪ್ರಾಯೋಜನೆಗಳನ್ನು ತಯಾರಿಸಿ ನಿಗಮದ ಮಂಡಳಿಯ ಒಪ್ಪಿಗೆಯನ್ನು ಪಡೆದು ಸಾಲ ನೀಡುವ ಬ್ಯಾಂಕುಗಳಿಗೆ ಮತ್ತು ಸರ್ಕಾರಕ್ಕೆ ಮಂಜೂರಾತಿಗಾಗಿ ಕಳುಹಿಸಲು ಕ್ರಮ ಕೈಗೊಂಡಿದೆ.

ೠ) <u>ಬರ್ಸೆರ ನೆಡುತೋಪುಗಳು:—</u>

ನಿಗಮವು ಅರಣ್ಯ ಇಲಾಖೆಯಿಂದ 1986—87 ರಲ್ಲಿ 310 ಹೆಕ್ಟೇರ ಬರ್ಸೆರ ನೆಡುತೋಪುಗಳನ್ನು ಪಡೆದು

ಅಭಿವೃದ್ಧಿ ಪಡಿಸಿ ನಿರ್ವಹಿಸುತ್ತಿತ್ತು. 1994–95ನೇ ಸಾಲಿನಲ್ಲಿ ದಾಸ್ತಾನಿನಲ್ಲಿದ್ದ, ಸುಮಾರು 1034 ಕೆಜಿ ಬರ್ನೆರಾ ಎಣ್ಣೆಯನ್ನು ಮಾರುವುದರ ಮೂಲಕ ರೂ.3.88 ಲಕ್ಷ ಆದಾಯ ಬಂದಿರುತ್ತದೆ. ಈ ನೆಡುತೋಪುಗಳನ್ನು ನಿರ್ವಹಿಸಿದ ಪ್ರತಿ ವರ್ಷಗಳಲ್ಲೂ ನಿಗಮವು ನಷ್ಟ ಹೊಂದಿರುವುದರ ಪ್ರಯುಕ್ತ ಸದರಿ ಪ್ಲಾಂಟೇಶನ್ಸ್‌ಗಳನ್ನು ಅರಣ್ಯ ಇಲಾಖೆಗೆ ವರ್ಗಾಯಿಸಲು ಸರ್ಕಾರವು ತನ್ನ ಆದೇಶದ ಸಂಖ್ಯೆ ಅಪಜೀ:117:ಎಫ್‌ಪಿಸಿ:92 ದಿನಾಂಕ 18–2–94ರಲ್ಲಿ ಹೊರಡಿಸಿರುವಂತೆ ಸದರಿ ನೆಡುತೋಪುಗಳನ್ನು ಇಲಾಖೆಗೆ ದಿನಾಂಕ 1-5–94 ರಂದು ವರ್ಗಾಯಿಸಲಾಗಿರುತ್ತದೆ. ನಿಗಮದ ವೆಚ್ಚದಿಂದ ಸದರಿ ಕ್ಷೇತ್ರದಲ್ಲಿ ಒಂದು ನಿವಾಸವನ್ನು 1.01 ಲಕ್ಷ ರೂ.ಗಳಲ್ಲಿ ನಿರ್ಮಿಸಿರುವುದರ ಬಗ್ಗೆ ಇಲಾಖೆಯವರು ಈ ಮೊತ್ತವನ್ನು ನೀಡಬೇಕಾಗಿರುತ್ತದೆ.

## ಹೊಸ ಪ್ರಾಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಉದ್ದೇಶಿಸಿರುವುದು :

ಕರ್ನಾಟಕ ಸರ್ಕಾರ ಮತ್ತು ನಬಾರ್ಡ್ ಸಂಸ್ಥೆಗಳು ಈ ಕೆಳಗೆ ಕಾಣಿಸಿರುವಂತ 3 ಪ್ರಾಯೋಜನೆಗಳನ್ನು ಮಂಜೂರು ಮಾಡಲಾಗಿದ್ದು ಅವುಗಳನ್ನು 1994–95 ರಿಂದ ಜಾರಿಗೆ ಗೊಳಿಸಲು ಕ್ರಮ ಕೈಗೊಂಡಿರುತ್ತವೆ.

| ಕ್ರಮ ಸಂಖ್ಯೆ | ಪ್ರಾಯೋಜನೆಯ ಹೆಸರು | ವಿಸ್ತೀರ್ಣ (ಹೆ·ಗಳಲ್ಲಿ) | ಪ್ರಾಯೋಜನೆಯ ಒಟ್ಟು ಮೊತ್ತ (ರೂ·ಲಕ್ಷಗಳಲ್ಲಿ) |
|---|---|---|---|
| 1) | ಬೆಂಗಳೂರು ನಗರಕ್ಕಾಗಿ ಉರುವಲು ಕಟ್ಟಿಗೆ ಯೋಜನೆ | 2400 | 546·160 |
| 2) | ರಬ್ಬರ್ ಮರುನಾಟಿಕೆ ಯೋಜನೆ | 311 | 146·783 |
| 3) | ಕೋಲಾರ ಜಿಲ್ಲೆಗಾಗಿ ಉರುವಲು ಕಟ್ಟಿಗೆ ಮತ್ತು ಸಣ್ಣ ದಿಮ್ಮಿ ಯೋಜನೆ | 1500 | 142·330 |

1994ರ ಮಳೆಗಾಲದಲ್ಲಿ ಬೆಂಗಳೂರು ನಗರಕ್ಕಾಗಿ ಉರುವಲು ಕಟ್ಟಿಗೆ ಯೋಜನೆ ಮತ್ತು ಕೋಲಾರ ಜಿಲ್ಲೆಗಾಗಿ ಸ್ಕ್ರಬ್ ಟಿಂಬರ್ ಯೋಜನೆಯಡಿಯಲ್ಲಿ ಸುಮಾರು 500 ಹೆ· ಕ್ಷೇತ್ರದಲ್ಲಿ ನೆಡುತೋಪು ನಿರ್ಮಾಣವನ್ನು ಮಾಡಲಾಗಿದೆ· ಹಾಗೂ 1995ನೇ ಸಾಲಿಗೆ ಪ್ಲಾಂಟೇಶನ್ನು ಮಾಡಲು ಅನುಕೂಲವಾಗುವಂತೆ ರಬ್ಬರ್ ಮರು ನಾಟಿಕೆ ಯೋಜನೆಯಡಿಯಲ್ಲಿ ಸುಮಾರು 96,000 ರಬ್ಬರ್ ಸಸಿಗಳನ್ನು ಬೆಳೆಸಲಾಗಿದೆ·

<u>ಹೊಸ ಪ್ರಾಯೋಜನೆಗಳು:-</u>

ಇದಲ್ಲದೆ ಸರ್ಕಾರದ ನಿರ್ದೇಶನದಂತೆ ಈ ಕೆಳಗೆ ಕಾಣಿಸಿರುವಂತೆ ವಿವಿಧ ತಳಿಗಳನ್ನೊಳಗೊಂಡ ನೆಡುತೋಪುಗಳನ್ನು ಬೆಳೆಸಲು ಆರು ಪ್ರಾಯೋಜನೆಗಳನ್ನು ತಯಾರಿಸಿ ಸರ್ಕಾರವು ಪ್ರತಿ ವರ್ಷ 5 ಕೋಟಿ ರೂ·ಗಳ ಹೆಚ್ಚು ಧನವನ್ನು ನೀಡುವ ಭರವಸೆಯ ಮೇರೆಗೆ ತಯಾರಿಸಿ ಈಗಾಗಲೇ ನಬಾರ್ಡ ಸಂಸ್ಥೆ ಮತ್ತು ಸರ್ಕಾರಕ್ಕೆ ಮಂಜೂರಾತಿಗಾಗಿ ಕಳುಹಿಸಿ ಕೊಡಲಾಗಿದ್ದು, ಮಂಜೂರಾತಿಯ ನಿರೀಕ್ಷೆಯಲ್ಲಿರುತ್ತೇವೆ·

| ಕ್ರಮ ಸಂಖ್ಯೆ | ಪ್ರಾಜೆಕ್ಟಿನ ಹೆಸರು | ಹೆಕ್ಟೇರ್ಸ್ | ಪ್ರಾಜೆಕ್ಟಿನ ಒಟ್ಟು ವೆಚ್ಚ | ಬಿಡುಗಡೆ ಹಣ |
|---|---|---|---|---|
| | | | | (ಲಕ್ಷರೂಗಳಲ್ಲಿ) |
| 1) | ಪಲ್ಪ್‌ವುಡ್ ಪ್ಲಾಂಟೇಶನ್ಸ್ | 10,400 | 3030·68 | 2275·00 |
| 2) | ಟೀಕ್ ಪ್ಲಾಂಟೇಶನ್ಸ್ | 5, 000 | 5229·02 | 3800·00 |
| 3) | ಪರ್ಯಾಯ ಬೊಂಬು ಪ್ಲಾಂಟೇಶನ್ಸ್ | 5, 000 | 992·63 | 650·00 |
| 4) | ಬ್ಯಾಕವರಂಟ್ ಆರ್ಚರ್ಡ್ | 5, 000 | 4328·32 | 3075·00 |
| 5) | ಅಗೇವ | 5, 000 | 1797·14 | 750·00 |
| 6) | ಆಯಿಲ್ ಪಾಂ | 5, 000 | 884·58 | 410·00 |
| 7) | ಬೊಂಬು–ಕವರ–ಟೀಕ | 6, 000 | 1334·99 | 900·00 |

33) <u>ಕರ್ನಾಟಕ ಗೋಡಂಬಿ ಅಭಿವೃದ್ಧಿ ನಿಗಮ</u>

ಈ ಉದ್ಯಮವು ಫೆಬ್ರವರಿ 1978ರಲ್ಲಿ ಸ್ಥಾಪಿತವಾಗಿ ಹಾಲಿ ಇದ್ದ ಗೋಡಂಬಿ ನೆಡುತೋಪುಗಳನ್ನು ಪಡೆದು ಹಾಗೂ ಹೊಸ ನೆಡುತೋಪುಗಳನ್ನು ನಿರ್ಮಿಸುವುದಕ್ಕಾಗಿ ಮಂಗಳೂರಿನಲ್ಲಿ ಕೇಂದ್ರ ಕಛೇರಿಯೊಡನೆ ಸ್ಥಾಪಿತವಾಯಿತು. ರಾಜ್ಯ ಸರ್ಕಾರವು ಏಪ್ರಿಲ್ 1979ರಲ್ಲಿ 8000 ಹೆಕ್ಟೇರನಷ್ಟು ಗೋಡಂಬಿ ನೆಡುತೋಪುಗಳನ್ನು ನಿಗಮಕ್ಕೆ ವರ್ಗಾಯಿಸಿತು. ಇದರ ಜೊತೆಗೆ 2000 ಹೆಕ್ಟೇರುಗಳಷ್ಟು ಪ್ರದೇಶದ

ಗೋಡಂಬಿ ನೆಡುತೋಪುಗಳನ್ನು ಅರಣ್ಯ ಇಲಾಖೆಯಿಂದ ವರ್ಗಾಯಿಸಲು ಉದ್ದೇಶಿಸಿದೆ. ಕೇಂದ್ರ ಕಛೇರಿಯನ್ನು ಮಂಗಳೂರಿನಲ್ಲಿ ಹೊಂದಿದ್ದು ವಿಭಾಗ ಕಛೇರಿಗಳನ್ನು ಕುಂದಾಪುರ, ಕುಮುಟಾ, ಮತ್ತು ಮೂಡಬಿದ್ರೆಗಳಲ್ಲಿ ಹೊಂದಿದೆ. ಅಂತರ ರಾಷ್ಟ್ರೀಯ ಅಭಿವೃದ್ಧಿ ಸಂಸ್ಥೆ (ಐಡಿಎ) ನೆರವಿನಲ್ಲಿ ನಿಗಮವು ಗೋಡಂಬಿ ಯೋಜನೆಯ ಕಾರ್ಯ ನಿರ್ವಹಿಸುತ್ತಿದೆ.

ನಿಗಮವು ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರಗಳು ಭಾಗವಹಿಸುವುದರ ಮೂಲಕ ಈಕ್ವಿಟಿ ಬಂಡವಾಳ 49:51 ಪ್ರಮಾಣದಲ್ಲಿ ಸ್ಥಾಪಿಸಲ್ಪಟ್ಟಿತು.

## ಐಡಿಎ ವಿಶ್ವ ಬ್ಯಾಂಕಿನ ಸಹಾಯದಿಂದ ಮಲ್ಟಿಸ್ಟೇಟ್ ಕ್ಯಾಶ್ಯು ಪ್ರಾಜೆಕ್ಟ್ ಅಡಿಯಲ್ಲಿ ಗೋಡಂಬಿ ಯೋಜನೆ

ಈ ಯೋಜನೆಯಡಿ 1980-81 ರಿಂದ 1984-85ರ ವರೆಗೆ ನಿರ್ಮಿಸಿದ ನೆಡುತೋಪುಗಳ ಅಭಿವೃದ್ಧಿ ಹಾಗೂ 2500 ಹೆ. ಹೊಸ ನೆಡುತೋಪು ನಿರ್ಮಾಣ ಸೇರಿ ಈ ಯೋಜನೆಯ ವಿವರಗಳು ಈ ಕೆಳಗೆ ತೋರಿಸಿರುವಂತೆ ಇವೆ.

| ಮೂಲ | ಗುರಿ (ಲಕ್ಷ ರೂ.) | ಸಾಧನೆಯ ವಿವರಗಳು | ವೆಚ್ಚ (ಲಕ್ಷ ರೂ.) |
|---|---|---|---|
| ರಾಜ್ಯ ಸರ್ಕಾರದ ಈಕ್ವಿಟಿ | 110.76 | 1) ಉತ್ಪನ್ನದ ಬೆಲೆ | 180.57 |
| ಸರ್ಕಾರದ ಧನ ಸಹಾಯ | 8.00 | 2) ಕಟ್ಟಡಗಳು ಮತ್ತು ಯಂತ್ರಗಳು | 60.44 |

| ಮೂಲಗಳು | ಗುರಿ (ಲಕ್ಷ ರೂ) | ಸಾಧನೆಯು ವಿವರಗಳು | ವೆಚ್ಚ (ಲಕ್ಷ ರೂ.) |
|---|---|---|---|
| | | 3) ವಾಹನಗಳು | 4.60 |
| | | 4) ಉಪಕರಣಗಳು | 2.59 |
| ಸಾಲದ ಸಹಾಯ (ಲಕ್ಷ.ರೂ.ಗಳಲ್ಲಿ) | | | |
| ಸಿಂಡಿಕೇಟ್ ಬ್ಯಾಂಕ್ | 105.88 | 57 ವೇತನ ಮತ್ತು ಭತ್ಯಗಳು | 49.43 |
| ಕೆನರಾ ಬ್ಯಾಂಕ್ | 91.23 | 7 ಕಾರ್ಯಕ್ರಮದ ವೆಚ್ಚಗಳು | 15.49 |
| | 315.87 | | 313.12 |

1980–81ರಿಂದ 1984–85ರ ವರೆಗೆ ಉದ್ದೇಶಿತ 2500 ಹೆ. ಪ್ರದೇಶದ ನೆಡುತೋಪುಗಳಲ್ಲಿ 2564 ಹೆಕ್ಟೇರನಷ್ಟು ನಿರ್ಮಾಣ ಮಾಡಲಾಗಿದೆ.

1400 ಹೆಕ್ಟೇರ ನೆಡುತೋಪಿನ ನಿರ್ಮಾಣಕ್ಕೆ ಐಡಿಎ ಅಧಿಕ ಯೋಜನೆ :

1985–86 ರಿಂದ 1987–88ರ ಅವಧಿಯಲ್ಲಿ 1400 ಹೆಕ್ಟೇರ ನೆಡುತೋಪುಗಳನ್ನು ನಿರ್ಮಿಸಲಾಯಿತು. 1990.91 ರಿಂದ 1991.92ರ ವರೆಗೆ 12.57 ಲಕ್ಷ ರೂಪಾಯಿ ಆದಾಯ ಬಂದಿರುತ್ತದೆ. ಹಾಗೂ 112.97 ಲಕ್ಷ ರೂಪಾಯಿ ವೆಚ್ಚವಾಗಿ ನೆಡುತೋಪು ನಿರ್ಮಾಣ, ಸಿಬ್ಬಂದಿ ವೇತನ, ಉಪಕರಣಗಳನ್ನು ಕೊಳ್ಳುವಿಕೆ ಮುಂತಾದವುಗಳನ್ನು ಮಾಡಲಾಗಿದೆ. ಈ ರೀತಿ ಆದ ವೆಚ್ಚವನ್ನು ರೂ. 112.93 ಲಕ್ಷ ಮೊತ್ತವನ್ನು

ಸರ್ಕಾರದ ಸಹಾಯಧನ, ಬ್ಯಾಂಕಗಳ ಸಾಲದ ರೂಪದಲ್ಲಿ ಬಂದಿರುವ ಮೊತ್ತದಿಂದ ಹಾಗೂ ,ನಿಗಮದ ಒಳಗಡೆಯ ಇತರ ಮೂಲಗಳಿಂದ ಆದಾಯದಿಂದ ಮಾಡಲಾಗಿದೆ.

1.4.94ರಿಂದ 31.12.94ರ ವರೆಗೆ ಪೋಷಣೆಯ ಕಾಮಗಾರಿಯನ್ನು ಮಾತ್ರ ಕೈಗೊಳ್ಳಲಾಗಿದೆ. ಹಣ ಐಡಿಎ ಗೇರು ನೆಡುತೋಪಿನಿಂದ ವರಮಾನ ಗಳಿಸಿದ ವಿವರ ಈ ಕೆಳಗಿನಂತಿದೆ

(ಲಕ್ಷರೂ.ಗಳಲ್ಲಿ)

| ವರಮಾನ ಗಳಿಸಿದ ವರ್ಷ | ವರಮಾನ ಹಳೆ ಗೇರು ನೆಡುತೋಪಿನಿಂದ (ಲಕ್ಷ.ರೂ.ಗಳಲ್ಲಿ) | ವರ ಮಾನ ಹೊಸ (ಐಡಿಎ) ಗೇರು ನೆಡುತೋಪಿನಿಂದ (ಲಕ್ಷ.ರೂ.ಗಳಲ್ಲಿ) |
|---|---|---|
| 1982.83 | 16.19 | — |
| 1983.84 | 25.65 | — |
| 1984.85 | 30.34 | 0.42 |
| 1985.86 | 46.37 | 1.68 |
| 1986.87 | 64.45 | 6.64 |
| 1987.88 | 73.98 | 14.49 |
| 1988.89 | 74.69 | 19.47 |
| 1989.90 | 61.36 | 31.20 |
| 1990.91 | 62.47 | 36.89 |
| 1991.92 | 107.81 | 74.93 |
| 1992.93 | 88.54 | 83.53 |
| 1993.94 | 72.18 | 99.31 |

ಗುರುವಲು ಯೋಜನೆ:

1987-88 ರಿಂದ 1994-95ರ ವರೆವಿಗೆ ಆರ್ಥಿಕ ಮೂಲಗಳ, ವೆಚ್ಚ ಸಾಧನೆಗಳನ್ನು ಈ ಕೆಳಕಂಡಂತೆ ತೋರಿಸಲಾಗಿದೆ.

| ವರ್ಷ | ಗುರಿ ಆರ್ಥಿಕ (ಲಕ್ಷ ರೂಾಂಗಳಲ್ಲಿ) | ಗುರಿ ವಾಸ್ತವಿಕ (ಹೆ•) | ಸಾಧನೆ ಆರ್ಥಿಕ (ಲಕ್ಷ ರೂಾಗಳಲ್ಲಿ) | ಸಾಧನೆ ವಾಸ್ತವಿಕ |
|---|---|---|---|---|
| 1987•88 | 71•67 | 1000 | 17•65 | 375•40 |
| 1988•89 | 360•30 | 3000 | 136•30 | 658•05 |
| 1889•90 | 332•13 | 3000 | 305•51 | 1706•71 |
| 1990•91 | 214•52 | 3000 | 127•31 | 2100•00 |
| 1991•92 | 176•74 | 1000 | 186• 30 | 1592•00 |
| 1992•93 | 201•11 | 2000 | — | 1641•24 |
| 1993•94 | 197•77 | 2000 | 100•50 | 1251•22 |
| 1994•95 | — | — | — | — |

ಮೇಲಿನ ವೆಚ್ಚವನ್ನು ಪಶ್ಚಿಮ ಘಟ್ಟಗಳ ಅಭಿವೃದ್ಧಿ ಯೋಜನೆ, ರಾಷ್ಟ್ರೀಯ ಪಾಳು ಭೂಮಿ ಅಭಿವೃದ್ಧಿ ಮಂಡಳಿ, ರಾಜ್ಯ ಸರ್ಕಾರ ಹಾಗೂ ರಾಷ್ಟ್ರೀಕೃತ ಬ್ಯಾಂಕುಗಳ ಸಾಲದ ಹಣದಲ್ಲಿ ಮಾಡಲಾಗಿದೆ•

'ಏಳನೆಯ ವರ್ಷದ ಅಂತ್ಯದಲ್ಲಿ ಈ ರೀತಿಯಾಗಿ ನಿರ್ಮಾಣವಾದ ನೆಡುತೋಪುಗಳಿಂದ, ಉರುವಲನ್ನು ತೆಗೆದು ಅದರ ಉತ್ಪನ್ನ 55 ಮೆಟ್ರಿಕ್ ಟನ್ನು ಮತ್ತು 400 ಸಂಖ್ಯೆಗಳಷ್ಟು ಕಂಬಗಳೆಂದು ಅಂದಾಜು ಮಾಡಲಾಗಿದೆ• ಈ ರೀತಿಯಾಗಿ ತೆಗೆದ ಉತ್ಪನ್ನದ ಬೆಲೆಯನ್ನು ರೂ 40•00 ಒಂದು ಕಂಬಕ್ಕೆಂದೂ ಹಾಗೂ ರೂ 450•00 ಒಂದು ಮೆಟ್ರಿಕ್ ಟನ್ನಿಗೆಂದು ಅಂದಾಜು ಮಾಡಲಾಗಿದೆ•

<u>ಕ್ಲೋನಲ್ ಬ್ಯಾಂಕುಗಳ ಮತ್ತು ಕ್ಲೋನಲ್ ಮೋದೆಗಳ ರಚನೆ</u>

ನಿಗಮವು ಹನ್ನೆರಡು ಕ್ಲೋನಲ್ ಬ್ಯಾಂಕು ಹಾಗೂ ಕ್ಲೋನಲ್ ಮೋದೆಗಳನ್ನು ರಚಿಸಿದೆ• ಸಿಂಯೂನ ಪದಾರ್ಥವು ಹೆಚ್ಚು ಇಳುವರಿಯ ಕ್ಲೋನಲ್ ಗಿಡಗಳನ್ನು ಬೆಳೆಯಲು ಬೇಕಾಗುತ್ತದೆ•

ಕಸಿ ಮಾಡಿದ ಗಿಡಗಳನ್ನು ರೈತರಿಗೆ ಹಂಚಲಾಗುತ್ತಿದೆ.

## ಹಳೆಯ ನೆಡುತೋಪುಗಳ ಪುನಃ ಚೇತನ ಮತ್ತು ನಿರ್ವಹಣೆ:

ಐಡಿಎ ಪ್ರಾಜೆಕ್ಟಿನ ಜೊತೆಗೆ ನಿಗಮವು 8000 ಹೆಕ್ಟೇರಿನಲ್ಲಿನ 685 ಹೆಕ್ಟೇರ ನೆಡುತೋಪುಗಳನ್ನು ಪುನಃ ಚೇತನಗೊಳಿಸಿ ಇದಕ್ಕಾಗಿ 196.87 ಲಕ್ಷ ರೂಪಾಯಿಗಳ ವೆಚ್ಚ ಮಾಡಿದೆ, ಈ ವೆಚ್ಚಕ್ಕೆ ಬೇಕಾದ ಹಣವನ್ನು ಗೇರು ಮಾರಾಟದಿಂದಲೂ, ಕೇಂದ್ರ ಸರ್ಕಾರದ ಸಹಾಯದಿಂದಲೂ ಪಶ್ಚಿಮ ಘಟ್ಟದ ಅಭಿವೃದ್ಧಿ ಯೋಜನೆಯಿಂದಲೂ ಪಡೆದು ಇದರ ಆದಾಯವನ್ನು ಹಿಂದಿನ ವರ್ಷಗಳ ಆದಾಯಕ್ಕಿಂತ ಶೇಕಡ 10 ಜಾಸ್ತಿ ಮಾಡಲು ಉದ್ದೇಶಿಸಿದೆ.

## ಫೆನ್ನಿ ಯೋಜನೆ:

1989—90ನೇ ಸಾಲಿನಲ್ಲಿ ಕುಂದಾಪುರ ಗುಜ್ಜಾಡಿಯಲ್ಲಿ ಫೆನ್ನಿ ಯೋಜನೆಯನ್ನು ಸ್ಥಾಪಿಸಿ ಇದಕ್ಕೆ ಬೇಕಾದ ಯಂತ್ರೋಪಕರಣಗಳನ್ನು 34.00 ಲಕ್ಷ ರೂಪಾಯಿ ವೆಚ್ಚ ಮಾಡಿ ಅಳವಡಿಸಿದೆ. ಗೇರು ಹೊಟ್ಟನ್ನು ಹೊರಗಡೆಗೆ ಬಿಸಾಡುವ ಬದಲು ಅದನ್ನು ಲಾಭದಾಯಕವಾಗಿ ಉಪಯೋಗಿಸುವುದಾಗಿದೆ. ಈ ಯಂತ್ರೋಪಕರಣದ ಶಕ್ತಿ 9 ಮೆಟ್ರಿಕ ಟನ್ನಿನಷ್ಟು ಗೇರು ಹೊಟ್ಟನ್ನು ಒಂದು ದಿನಕ್ಕೆ ಉಪಯೋಗಿಸಿ 100 ದಿನ ಕಾರ್ಯ ನಿರ್ವಹಿಸಿ, 4700 ಬಾಟ್ಲಿನ (750 ಎಂ.ಎಲ್) ನಷ್ಟು ಫೆನ್ನಿಯನ್ನು ತೆಗೆಯುವುದಾಗಿದೆ. ಇದರ ಜೊತೆಗೆ ಬಿಡುವಿನ ವೇಳೆಯಲ್ಲಿ ಇದೇ ಯಂತ್ರವನ್ನು ಉಪಯೋಗಿಸಿ ಯಂತ್ರದಿಂದ ಫೆನ್ನಿಯನ್ನು ತಯಾರಿಸಬಹುದು. ನಿಶ್ಚಿತ ಉತ್ಪನ್ನವನ್ನು ನಿಗಮದ ಒಳಗಡೆಯ ಆದಾಯದಿಂದ ನಿರ್ವಹಿಸುವುದಾಗಿದೆ. ಇದರ ಉತ್ಪನ್ನವನ್ನು ಮಾರಲ್ಪಡುವುದರ ಕಷ್ಟವಾಗಿರುವುದರಿಂದ ಇದನ್ನು ಗೇಣಿ ಬಿಡಲು ತೀರ್ಮಾನಿಸಿದೆ.

## 34) ಕರ್ನಾಟಕ ಸ್ಟೇಟ್ ಫಾರೆಸ್ಟ್ ಇಂಡಸ್ಟ್ರೀಸ್ ಕಾರ್ಪೊರೇಷನ್ ಲಿಮಿಟೆಡ್

### ಸಂಸ್ಥೆಯ ಪರಿಚಯ

ಕರ್ನಾಟಕ ಸ್ಟೇಟ್ ಫಾರೆಸ್ಟ್ ಇಂಡಸ್ಟ್ರೀಸ್ ಕಾರ್ಪೊರೇಷನ್ ಲಿಮಿಟೆಡ್ 1973ರಲ್ಲಿ ರೂ. 2.00 ಕೋಟಿ (ಪ್ರತಿ 1000 ರೂ.ಗಳ 20000 ಈಕ್ವಿಟಿ ಶೇರು) ಅಧಿಕೃತ ಈಕ್ವಿಟಿ ಬಂಡವಾಳ ಹೂಡಿಕೆಯೊಂದಿಗೆ ಸ್ಥಾಪಿತಗೊಂಡಿತು. ದಿ.31-12-1994 ರಲ್ಲಿದ್ದಂತೆ 115.53 ಲಕ್ಷ ರೂ.ಗಳ ಸಂದಾಯವಾದ ಬಂಡವಾಳವಾಗಿರುತ್ತದೆ. ನಿಗಮವು ಕೆಳಕಂಡ ಎರಡು ಅಧೀನ ಸಂಸ್ಥೆಗಳನ್ನು ಹೊಂದಿದ್ದು ಕ್ರಮವಾಗಿ ತಾ.1-8-1979 ಮತ್ತು 1-8-1977ರಿಂದ ಕಾರ್ಯ ನಿರ್ವಹಿಸುತ್ತಿದೆ.

ಅ) ಕರ್ನಾಟಕ ಸ್ಟೇಟ್ ವಿನೀಯರ್ಸ್, ದಾಂಡೇಲಿ

ಆ) ಮೈಸೂರು ಮ್ಯಾಚ್ ಕಂಪನಿ ಲಿ. ಶಿವಮೊಗ್ಗ.

ನಿಗಮದ ಮುಖ್ಯ ಚಟುವಟಿಕೆಗಳಾದ ಅರಣ್ಯ ಬೆಳೆ, ಅರಣ್ಯ ಉತ್ಪನ್ನಗಳ ಸಂರಕ್ಷಣಾ, ಅರಣ್ಯ ಉತ್ಪನ್ನಗಳ ತಯಾರಿಕೆ ಮತ್ತು ಮಾರುಕಟ್ಟೆ ಮಾಡುವುದು, ಅರಣ್ಯ ಕೈಗಾರಿಕೆಯ ಕಚ್ಚಾ ಪದಾರ್ಥಗಳನ್ನು ಉತ್ಪಾದಿಸಲು ಉತ್ತೇಜನ ನೀಡುವಿಕೆ ಇವೆ ಮುಂತಾದ ಉದ್ದೇಶಗಳಾಗಿರುತ್ತವೆ ಮಧ್ಯವರ್ತಿಗಳನ್ನು ಅರಣ್ಯ ಕಾರ್ಯ ಚಟುವಟಿಕೆಗಳಿಂದ ಸಂಪೂರ್ಣವಾಗಿ ತೊಡೆದು ಹಾಕುವ ಜವಾಬ್ದಾರಿ ಈ ಸಂಸ್ಥೆಯದಾಗಿರುತ್ತದೆ.

## ಕಾರ್ಯರೀತಿ ವೃತ್ತಾಂತ:

ಕೆಎಸ್ಎಫ್ಐಸಿ ಯು ಶಿವಮೊಗ್ಗ ಮತ್ತು ದಾಂಡೇಲಿಯಲ್ಲಿ ಎರಡು ಸಾಮಿಲ್ಲುಗಳನ್ನು ನಡೆಸುತ್ತಿದ್ದು ಮರ ಕೊಯ್ಯುವಿಕೆ, ಮರದ ತುಂಡು ಹಾಗೂ ಪೀಠೋಪಕರಣಗಳನ್ನು ತಯಾರಿಸುತ್ತಿದೆ. 1-4-1994ರಿಂದ 31-12-1994ರ ವರೆಗಿನ ಕ್ರಯ ವಿಕ್ರಯ ಈ ಕೆಳಕಂಡಂತೆ ಇರುತ್ತದೆ.

| ಅ) ಮರದ ದಿಮ್ಮಿಗಳ ಕ್ರಯ | ಬೆಲೆ ರೂ. ಲಕ್ಷಗಳಲ್ಲಿ |
|---|---|
| 516.477 ಘ.ಮೀ. | 45.12 |

ಅ) ಮರದ ತುಂಡುಗಳು (ಸಾನ್ ಸೈಜ್)

| ವ್ಯಾಪಾರದ ಗುರಿ | | ಉತ್ಪನ್ನ | | ವಾಸ್ತವಿಕ ವ್ಯಾಪಾರ | |
|---|---|---|---|---|---|
| ಪರಿಮಾಣ ಘ.ಮೀ | ಬೆಲೆ ರೂ. ಲಕ್ಷಗಳಲ್ಲಿ | ಪರಿಮಾಣ ಘ.ಮೀ | ಬೆಲೆ ರೂ. ಲಕ್ಷಗಳಲ್ಲಿ | ಪರಿಮಾಣ ಘ.ಮೀ | ಬೆಲೆ ರೂ. ಲಕ್ಷಗಳಲ್ಲಿ |
| 180.00 | 15.50 | 437.165 | 15.35 | 406.562 | 11.99 |

ಇ)ಪೀಠೋಪಕರಣ ಮತ್ತು ಸ್ಲೀಪರ್ಸ್

| ಮಾರಾಟದ ಗುರಿ | | ಉತ್ಪನ್ನ | | ವಾಸ್ತವಿಕ ಮಾರಾಟ | |
|---|---|---|---|---|---|
| ಸಂಖ್ಯೆ | ಬೆಲೆ ರೂ. ಲಕ್ಷಗಳಲ್ಲಿ | ಪರಿಮಾಣ ಸಂಖ್ಯೆ | ಬೆಲೆ ರೂ. ಲಕ್ಷಗಳಲ್ಲಿ | ಪರಿಮಾಣ | ಬೆಲೆ ರೂ. ಲಕ್ಷಗಳಲ್ಲಿ |
| 6285 | 75.00 | 6144 | 60.13 | 6020 | 72.06 |

ಸಮುಲಾಹ ಫಲಕಗಳು(ಬ್ಲಾಕ್‌ಬೋರ್ಡ್)ಮತ್ತು ಸಮ್ಯದಿಂ ಬಾಗಿಲುಗಳು(ಫ್ಲಶ್‌ಡೋರ್)ಮತ್ತು ಶ್ರೀಗಂಧ ಬಿಳಿ ಚಕ್ಕೆಪುಡಿ.

ಅ)ಬ್ಲಾಕ್‌ಬೋರ್ಡ್ ಮತ್ತು ಫ್ಲಶ್‌ಡೋರ್

| ಮಾರಾಟದ ಗುರಿ | | ಉತ್ಪನ್ನ | | ವಾಸ್ತವಿಕ ಮಾರಾಟ | |
|---|---|---|---|---|---|
| ಪರಿಮಾಣ ಚ.ಅಡಿ | ಬೆಲೆ ರೂ. ಲಕ್ಷಗಳಲ್ಲಿ | ಪರಿಮಾಣ ಚ.ಅಡಿ | ಬೆಲೆ ರೂ. ಲಕ್ಷಗಳಲ್ಲಿ | ಪರಿಮಾಣ ಚ.ಅಡಿ | ಬೆಲೆ ರೂ. ಲಕ್ಷಗಳಲ್ಲಿ |
| 97500 | 28.50 | 189772 | — | 138953 | 50.55 |

ಆ)ಶ್ರೀಗಂಧ ಬಿಳಿ ಚಕ್ಕೆಪಟ್ಟಿ

| ಮಾರಾಟದ ಗುರಿ | | | ಉತ್ಪನ್ನ | | ವಾಸ್ತವಿಕ ಮಾರಾಟ | |
|---|---|---|---|---|---|---|
| ಪರಿಮಾಣ ಮೆ.ಟನ | ಬೆಲೆ ರೂ. ಲಕ್ಷಗಳಲ್ಲಿ | | ಪರಿಮಾಣ ಮೆ.ಟನ | ಬೆಲೆ ರೂ. ಲಕ್ಷಗಳಲ್ಲಿ | ಪರಿಮಾಣ ಚ.ಅಡಿ | ಬೆಲೆ ರೂ. ಲಕ್ಷಗಳಲ್ಲಿ |
| 104.000 | 7.50 | | 38.000 | — | 34.562 | 6.04 |
| ಚಿಗಟು ಪಟ್ಟಿ | | | 50.000 | — | 42.080 | 7.82 |

ಇ)ಕೆಎಸ್ಎಫ್ಐಸಿ ಹೊರದೇಶಕ್ಕೆ ಶ್ರೀಗಂಧದ ಚಕ್ಕೆಗಳನ್ನು ರಫ್ತು ಮಾಡುತ್ತಿದೆ. ಈ ಸಂಬಂಧದಲ್ಲಿ 1—4—1994ರಿಂದ 31—12—1994ರವರೆಗೆ 10.000ಮೆ.ಟನ ರೂ.31.01ಲಕ್ಷಗಳಷ್ಟು ಶ್ರೀಗಂಧ ಚಕ್ಕೆಗಳನ್ನು ಹೊರದೇಶಕ್ಕೆ ರಫ್ತು ಮಾಡಿರುತ್ತದೆ.

ಸಿಗುವ ಅರಣ್ಯ ಇಲಾಖೆಗೆ ಪಾಲಿಥೀನ ಚೀಲ ಸರಬರಾಜನ್ನು ಮಾಡುತ್ತಿದ್ದು 1—4—1994ರಿಂದ 31—12—1994ರವರೆಗೆ ಮಾರಾಟ ಮಾಡಿದ ಪಾಲಿಥೀನ ಚೀಲಗಳು ಈ ಕೆಳಕಂಡಂತೆ ಇರುತ್ತದೆ.

| ಮಾರಾಟದ ವಿವರ | ಪರಿಮಾಣ(ಮೆ.ಟನಗಳು) | ಬೆಲೆ ರೂ.ಲಕ್ಷಗಳು |
|---|---|---|
| ಅ) ಪಾಲಿಥೀನ ಚೀಲಗಳು | 192.398 | 121.64 |
| ಆ) ಕಪ್ಪು ಚೀಲ:ಹಾಳೆ | 2.000 | 1.12 |
| ಇ) 'ಒವನ ಚೀಲಗಳು | 642500 ಸಂಖ್ಯೆ | 23.59 |

ರಾಜ್ಯದಾದ್ಯಂತ 89 ಸಾಟೆ ಡಿಪೋಗಳನ್ನು ನಡೆಸುತ್ತಿದ್ದು ಈ ಸಾಟೆ ಡಿಪೋಗಳ ಮುಖಾಂತರ ಸಾರ್ವಜನಿಕರಿಗೆ ನ್ಯಾಯವಾದ ಬೆಲೆಯಲ್ಲಿ ಉರುವಲು ಸೌದೆಯನ್ನು ವಿತರಣೆ ಮಾಡುತ್ತಿದೆ. 1-4-1994 ರಿಂದ 31-12-1994ರ ವರೆಗಿನ ವ್ಯಾಪಾರ ಮತ್ತು ಆದಾಯದ ವಿವರಣೆ ಈ ಕೆಳಕಂಡಂತಿದೆ.

ಅ)

| ವ್ಯಾಪಾರದ ಗುರಿ | | ವಾಸ್ತವಿಕ ವ್ಯಾಪಾರ | |
|---|---|---|---|
| ಪರಿಮಾಣ ಮೆ.ಟನ್‌ಗಳು | ಬೆಲೆ ರೂ. ಲಕ್ಷಗಳು | ಪರಿಮಾಣ ಮೆ.ಟನ್ | ಬೆಲೆ ರೂ. ಲಕ್ಷಗಳು |
| 41000 | 212.28 | 27903 | 157.85 |

ಆ. ಲಾಗಿಂಗ್ ಚಟುವಟಿಕೆಗಳು:

ಶಿವಮೊಗ್ಗ, ಧಾರವಾಡ, ಮೈಸೂರು, ಮಂಗಳೂರು, ಕುಮಟ ಮತ್ತು ಸಿರಸಿ ವಿಭಾಗಗಳಲ್ಲಿ ಅರಣ್ಯ ಇಲಾಖೆಯು ದಿಮ್ಮಿ ಕೊರೆಯುವ ಕಾರ್ಯ ನಿರ್ವಹಣೆ ಹೊಂದಿದ್ದು, 1-4-1994 ರಿಂದ 31-12-1994ರ ವರೆವಿಗೆ ನಿರ್ವಹಿಸಿದ ವಿವರಗಳು ಈ ಕೆಳಕಂಡಂತಿದೆ.

| ವಿಭಾಗದ ಹೆಸರು | ಕೆಲಸ ನಿರ್ವಹಿಸಿದ ಕಲಾಪಗಳ ಸಂಖ್ಯೆ | ದಿಮ್ಮಿ ಕ್ವಿ. | ಉರುವಲು ಕಟ್ಟಿಗೆ ಕ್ವಿ | ತಯಾರಿಸಿದ ಪರಿಮಾಣ | | |
| --- | --- | --- | --- | --- | --- | --- |
| | | | | ಬೊಂಬು ಕ್ವಿ. | ಪೋಲ್ಸ್ ಸಂಖ್ಯೆಗಳು | ಪಲ್ಪ್‌ವುಡ್ ಎಂ.ಟಿ. |
| ಶಿವಮೊಗ್ಗ | 37 | 1246 | 4569 | — | 6215 | 7667 |
| ಧಾರವಾಡ | 33 | 7560 | 54491 | — | — | — |
| ಮೈಸೂರು | 11 | 14 | 9267 | 1075 | 10929 | — |
| ಮಂಗಳೂರು | 5 | 225 | 959 | — | — | — |
| ಕುಮಟಾ | 12 | 1462 | 12473 | 2222 | — | — |
| ಅರವಂಪಿ, ಬೆಂಗಳೂರು | 8 | -- | 7580 | — | — | 645 |
| | 106 | 10507 | 89339 | 3297 | 17144 | 8312 |

ನಿಗಮದಿಂದ ಕೇರಳ ಇಂಡಿಯಾ ಲಿಮಿಟೆಡ ಮತ್ತು ಇತರ ಸಂಸ್ಥೆಗಳಿಗೆ ಪಲ್ಪಿಂಗ ಟಿಂಬರ (ಕಚ್ಚಾ ಪದಾರ್ಥಗಳು)ನ್ನು ಸರಬರಾಜು ಮಾಡುತ್ತಿದೆ. 1-4-1994ರಿಂದ 31-12-1994ರ ವರೆಗೆ 82.09 ಲಕ್ಷಗಳ ಮೌಲ್ಯದ ಸರಕನ್ನು ಪೂರೈಸಲಾಗಿದೆ. ಈ ದಿಸೆಯಲ್ಲಿ 31-12-1994ರ ವರೆವಿಗೆ ರೂ.37.50ಲಕ್ಷಗಳ ಗುರಿ ಇತ್ತು.

<u>1-4-94ರಿಂದ 31-12-1994ರ ವರೆಗಿನ ಹಣಕಾಸಿನ ಸ್ಥಿತಿ</u>

| | ರೂ.ಲಕ್ಷಗಳು |
|---|---|
| ಆದಾಯ | 1009.31 |
| ಖರ್ಚು | 1037.40 |

## ಕೋಷ್ಟಕ: 1

1994-95 ರಲ್ಲಿ ಕರ್ನಾಟಕ ರಾಜ್ಯದಲ್ಲಿನ ಜಿಲ್ಲಾವಾರು ಅರಣ್ಯ ಪ್ರದೇಶ (ವಿಸ್ತೀರ್ಣ ಚ.ಕಿ.ಮೀಟರುಗಳಲ್ಲಿ)

| ಕ್ರಮ ಸಂಖ್ಯೆ | ಜಿಲ್ಲೆ | ಭೂ ಪ್ರದೇಶ | ಅರಣ್ಯ ಪ್ರದೇಶ | ಒಟ್ಟು ಭೂಮಿ ಪ್ರದೇಶದಲ್ಲಿ ಶೇಕಡವಾರು ಅರಣ್ಯ ಪ್ರದೇಶ |
|---|---|---|---|---|
| 1 | 2 | 3 | 4 | 5 |
| 1 | ಬೆಂಗಳೂರು | 8028 | 1168·02 | 14·55 |
| 2 | ಬೆಳಗಾವಿ | 13444 | 2245·57 | 16·70 |
| 3 | ಬಳ್ಳಾರಿ | 9562 | 1743·53 | 18·23 |
| 4 | ಬಿಜಾಪುರ | 17123 | 827·58 | 4·83 |
| 5 | ಬೀದರ್ | 5418 | 482·31 | 8·90 |
| 6 | ಚಿಕ್ಕಮಗಳೂರು | 7221 | 2179·08 | 30·16 |
| 7 | ಚಿತ್ರದುರ್ಗ | 10155 | 1562·29 | 15·38 |
| 8 | ದಕ್ಷಿಣ ಕನ್ನಡ | 8336 | 5181·30 | 62·17 |
| 9 | ಧಾರವಾಡ | 13782 | 1436·73 | 10·42 |
| 10 | ಗುಲ್ಬರ್ಗಾ | 16102 | 1137·85 | 7·07 |
| 11 | ಹಾಸನ | 6626 | 541·07 | 8·17 |
| 12 | ಕೊಡಗು | 4108 | 1259·52 | 30·66 |
| 13 | ಕೋಲಾರ | 7795 | 1039·41 | 13·33 |
| 14 | ಮಂಡ್ಯ | 4982 | 272·79 | 5·42 |
| 15 | ಮೈಸೂರು | 12463 | 4129·62 | 33·14 |
| 16 | ರಾಯಚೂರು | 13883 | 1090·03 | 7·85 |
| 17 | ಶಿವಮೊಗ್ಗ | 10576 | 3270·16 | 30·92 |

ಕೋಷ್ಟಕ : 1 ಮುಂದುವರಿದಿದೆ

| 1 | 2 | 3 | 4 | 5 |
|---|---|---|---|---|
| 18 | ತುಮಕೂರು | 10648 | 865·17 | 8·13 |
| 19 | ಉತ್ತರ ಕನ್ನಡ | 10247 | 8291·53 | 80·92 |
| | ರಾಜ್ಯದ ಮೊತ್ತ | 190498 | 38723·56 | 20·33 |

ಕೋಷ್ಟಕ : 2

1994–95 ಅರಣ್ಯ ಪ್ರದೇಶದ ವಿವಿಧ ವರ್ಗಗಳು ಮತ್ತು ಅರಣ್ಯದಲ್ಲಿ ಬೆಳೆದ ಅಂದಾಜು ವೃಕ್ಷಗಳು
(ತಾತ್ಕಾಲಿಕ)

| ಕ್ರಮ ಸಂಖ್ಯೆ | ವಿಧಗಳು | ಒಟ್ಟು ಅರಣ್ಯ ಪ್ರದೇಶದ ಶೇಕಡಾವಾರು | ಪ್ರತಿಂತಿರಾಂದು ವಿಧದಲ್ಲಿರುವ ಅರಣ್ಯ ಪ್ರದೇಶ (000 ಹೆ·ಗಳಲ್ಲಿ) | ಹೆಕ್ಟೇರ್ ಒಂದಕ್ಕೆ ಬೆಳೆದಿರುವ ಮರಗಳು (ಘ·ಮೀ) | ಪ್ರತಿಂತಿರಾಂದು ಅರಣ್ಯ ವಿಧದಲ್ಲಿ ಬೆಳೆದಿರುವ ಮರಗಳು (ಘ·ಮೀ) |
|---|---|---|---|---|---|
| 1) | ನಿತ್ಯ ಹರಿದ್ವರ್ಣ ಮತ್ತು ಅರೆ ನಿತ್ಯಹರಿದ್ವರ್ಣ ಕಾಡುಗಳು | 14·98 | 580 | 175 | 101·50 |
| 2) | ತೇವಾಂಶವಿದ್ದರೂ ಕಾಲ ಕಾಲಕ್ಕೆ ಉದುರಿಹೋಗುವ ಕಾಡುಗಳು | 14·93 | 578 | 100 | 57·80 |
| 3) | ಒಳ ಹವೆಂತು ಕಾಡುಗಳು | 18·78 | 727 | 50. | 36·35 |
| 4) | ಪೊದೆಗಳು ಮತ್ತು ಗಿಡ ಗಂಟೆಗಳು | 21·33 | 826 | 25 | 20·45 |
| 5) | ಸಾಚೆಂತಂತೆ ಉಪಂತಿರಾಗಕ್ಕೆ ಬಾರದಂತೆ ಮರಗಳಿರುವ ಅರಣ್ಯ | 29·98 | 1161 | — | — |
| | ಒಟ್ಟು | 100·00 | 3872 | | 216·10 |

## ಕೋಷ್ಟಕ : 3

1994–95ರಲ್ಲಿ ಜಿಲ್ಲಾವಾರು ಅರಣ್ಯ ಪ್ರದೇಶ ವಿವಿಧ ವರ್ಗಗಳಲ್ಲಿ (ವಿಸ್ತೀರ್ಣ ಚ.ಕಿ.ಮೀಟರುಗಳಲ್ಲಿ)

| ಕ್ರ ಸಂ. | ಜಿಲ್ಲೆ | ಮೀಸಲು ಅರಣ್ಯ | ರಕ್ಷಿಸಲ್ಪಟ್ಟ ಅರಣ್ಯ | ವರ್ಗೀಕರಿಸಿದ ಅರಣ್ಯ | ಗ್ರಾಮಾಂತರ ಅರಣ್ಯ | ಖಾಸಗೀ ಅರಣ್ಯ | ಮೊತ್ತ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1) | ಬೆಂಗಳೂರು (ನಗರ) | 45·86 | 27·78 | — | — | — | 73·64 |
| 2) | ಬೆಂಗಳೂರು (ಗ್ರಾಮಾಂತರ) | 1078·11 | 8·27 | — | 8·00 | — | 1094·38 |
| 3) | ಬೆಳಗಾಂ | 2057·42 | 11·78 | 52·94 | — | 123·43 | 2245·57 |
| 4) | ಬಳ್ಳಾರಿ | 1236·21 | — | 477·59 | — | 29·73 | 1743·53 |
| 5) | ಬಿಜಾಪುರ | 824·19 | 0·11 | 3·28 | — | — | 827·57 |
| 6) | ಬೀದರ್ | 63·35 | 90·89 | 328·07 | — | — | 482·31 |
| 7) | ಚಿಕ್ಕಮಗಳೂರು | 1431·72 | 184·32 | 555·29 | 7·75 | — | 2179·08 |
| 8) | ಚಿತ್ರದುರ್ಗ | 958·30 | 5·05 | 593·60 | 5·74 | — | 1562·29 |
| 9) | ದಕ್ಷಿಣ ಕನ್ನಡ | 2120·43 | 1563·62 | 1408·64 | — | 88·61 | 5181·30 |
| 10) | ಧಾರವಾಡ | 1271·54 | 14·01 | 93·21 | — | 57·97 | 1436·73 |

ಕೋಷ್ಟಕ – 3 ಮುಂದುವರಿದ

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 11) | ಗುಲ್ಬರ್ಗಾ | 345·64 | — | 785·61 | 6·60 | — | 1137·85 |
| 12) | ಹಾಸನ | 448·71 | — | 86·95 | 5·41 | — | 541·07 |
| 13) | ಕೊಡಗು | 1136·46 | 27·14 | 95·92 | — | — | 1259·52 |
| 14) | ಕೋಲಾರ | 877·93 | 43·31 | 61·56 | 56·61 | — | 1039·41 |
| 15) | ಮಂಡ್ಯ | 138·19 | 6·06 | 128·54 | — | — | 272·79 |
| 16) | ಮೈಸೂರು | 3875·59 | 3·17 | 250·86 | — | — | 4129·62 |
| 17) | ರಾಯಚೂರು | 251·74 | 93·40 | 744·89 | — | — | 1090·03 |
| 18) | ಶಿವಮೊಗ್ಗ | 1945·72 | 1298·28 | 21·57 | 13·59 | — | 3270·16 |
| 19) | ತುಮಕೂರು | 775·58 | 21·21 | 5970·70 | — | 8·68 | 865·17 |
| 20) | ಉತ್ತರ ಕನ್ನಡ | 7727·84 | 542·77 | 0·02 | 20·90 | — | 8291·53 |
| | ಮೊತ್ತ | 28610·53 | 3932·17 | 5748·24 | 124·20 | 308·42 | 38723·56 |

ಕೋಷ್ಟಕ : 4

ಕರ್ನಾಟಕ ಅರಣ್ಯ ಇಲಾಖೆಯ ಆಡಳಿತ ವ್ಯವಸ್ಥೆಯನ್ನು ತೋರಿಸುವ ಪಟ್ಟಿ

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಶೃಂಗ ಮಟ್ಟದಲ್ಲಿ)
(1)
ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಸಂರಕ್ಷಣೆ)
ಉಪ ಅರಣ್ಯ ಸಂರಕ್ಷಣಾಧಿಕಾರಿ (ಭೂ ಸಂರಕ್ಷಣೆ)
ಮುಖ್ಯ ಲೆಕ್ಕಾಧಿಕಾರಿ
ಸಹಾಯಕ ಸಾಂಖ್ಯಿಕ ನಿರ್ದೇಶಕ
ಆಡಳಿತ ಸಹಾಯಕ

| | | |
|---|---|---|
| ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ<br>ಉಪ ಅರಣ್ಯ ಸಂರಕ್ಷಣಾಧಿಕಾರಿ (ಕೇ.ಸಾ)<br>ಆಡಳಿತ ಸಹಾಯಕ | ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ ಸಂರಕ್ಷಣೆ)<br>ಉಪ ಅರಣ್ಯ ಸಂರಕ್ಷಣಾಧಿಕಾರಿ (ತಾಂತ್ರಿಕ ಸಹಾಯಕರು)<br>ಆಡಳಿತ ಸಹಾಯಕ | ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಸಾಮಾಜಿಕ ಅರಣ್ಯ)<br>ಉಪ ಅರಣ್ಯ ಸಂರಕ್ಷಣಾಧಿಕಾರಿ<br>ಆಡಳಿತ ಸಹಾಯಕ |

ಪ್ರತಿಯೊಂದರ ಘಟಕಕ್ಕೆ ಸಂಬಂಧಿಸಿದ ವೃತ್ತ ಮತ್ತು ವಿಭಾಗಗಳು

| (2) | (3) | (4) |
|---|---|---|
| ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ<br>ಪ್ರಾದೇಶಿಕ ವೃತ್ತಗಳು ಹಾಗೂ | ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ<br>(ವನ್ಯಜೀವಿ ಸಂರಕ್ಷಣೆ) | ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ<br>(ಸಾಮಾಜಿಕ ಅರಣ್ಯ) |

| (2) | | (3) | (4) | |
|---|---|---|---|---|
| ವಿಭಾಗಗಳು | | ಕೋಷ್ಟಕ — 4 ಮುಂದುವರಿದಿದೆ | | |
| ವೃತ್ತಗಳು | ವಿಭಾಗಗಳು | ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ ಸಂರಕ್ಷಣೆ) ಇವರ ಅಧೀನದಲ್ಲಿ | ವೃತ್ತ ಮಟ್ಟದಲ್ಲಿ ಅರಣ್ಯ ಸಂರಕ್ಷಣಾಧಿಕಾರಿ | |
| ಂಗಳೂರು | 1)ಬೆಂಗಳೂರು (ಗ್ರಾ) | ಉಪ ಅರಣ್ಯ ಸಂರಕ್ಷಣಾಧಿಕಾರಿ ಕನಕಪುರ | ಜಿಲ್ಲಾ ಮಟ್ಟದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ | |
| | 2)ಬೆಂಗಳೂರು (ನ) | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಬನ್ನೇರುಘಟ್ಟ | ಬೆಂಗಳೂರು | ಮೈಸೂರು<br>ಮಂಡ್ಯ<br>ಬೆಂಗಳೂರು |
| | 3)ಕೋಲಾರ | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಮಡಿಕೇರಿ | | |
| | 4)ತುಮಕೂರು | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಮೈಸೂರು | | |
| | 5)ಬೆಂಗಳೂರು (ಅ·ಸಂ·ದ) | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಧಾರವಾಡ | | |
| ಬೆಳಗಾಂವ | 1)ಬಾಗಲಕೋಟೆ<br>2)ಬೆಳಗಾಂವ<br>3)ಗೋಕಾಕ್<br>4)ಧಾರವಾಡ<br>5)ಬೆಳಗಾಂವ (ಅ·ಸಂ·ದ)<br>6)ಗದಗ | ವೃತ್ತಗಳು : ವಿಭಾಗಗಳು<br>ಅರಣ್ಯ ಸಂರಕ್ಷಣಾಧಿಕಾರಿ ಅಧೀನದಲ್ಲಿ : ಉಪ ಅರಣ್ಯ ಸಂರಕ್ಷಣಾಧಿಕಾರಿ ಅಧೀನದಲ್ಲಿ | ಬೆಂಗಳೂರು | ತುಮಕೂರು,<br>ಕೋಲಾರ<br>ಚಿತ್ರದುರ್ಗ |

ಕೋಷ್ಟಕ - 4 ಮುಂದುವರಿದಿದೆ

| (2) | | (3) | | (4) | |
|---|---|---|---|---|---|
| ಮೈಸೂರು | 1)ಮೈಸೂರು<br>2)ಮಂಡ್ಯ<br>3)[illegible]<br>4)ಮೈಸೂರು ಪಶ್ಚಿಮ ಹುಣಸೂರು<br>5)ಕೊಳ್ಳೇಗಾಲ | ಕ್ಷೇತ್ರ ನಿರ್ದೇಶಕರು ಹುಲಿ ಯೋಜನೆ ಮೈಸೂರು | 1)ಚಾಮರಾಜ ನಗರ<br>2)ಹುಣಸೂರು<br>3)ಉಪ ನಿರ್ದೇಶಕರು<br>4)ಹುಲಿ ಯೋಜನೆ ಗುಂಡ್ಲುಪೇಟೆ | ಧಾರವಾಡ | ಧಾರವಾ[ಡ]<br>ಬಿಜಾಪು[ರ]<br>ಬೆಳಗಾಂ<br>ಉತ್ತರ ಕನ್ನಡ<br>ಉಪ ಅರಣ್ಯ ಸಂರಕ್ಷಣಾಧಿಕಾ[ರಿ] (ತರಬೇತಿ) ತಟ್ಟಿಹಳ್ಳಿ |
| ಕೊಡಗು | 1)ಮಡಿಕೇರಿ<br>2)ಮಂಗಳೂರು<br>3)ವಿರಾಜಪೇಟೆ<br>4)ಕುಂದಾಪುರ<br>5)ಮಡಿಕೇರಿ (ಅ·ಸಂ·ದ) | ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಶಿವಮೊಗ್ಗ | 1)ಶಿವಮೊಗ್ಗ<br>2)ಚಿಕ್ಕಮಗಳೂರು<br>3)ಕಾರ್ಕಳ<br>4)ದಾಂಡೇಲಿ | ಹಾಸನ | ಹಾಸನ<br>ಮಡಿಕೇರಿ<br>ಶಿವಮೊಗ್ಗ<br>ದಕ್ಷಿಣ ಕನ್ನಡ<br>ಚಿಕ್ಕಮಗಳೂರು |
| | | | | ಗುಲ್ಬರ್ಗಾ | ಗುಲ್ಬರ್ಗಾ<br>ಬಳ್ಳಾರಿ<br>ರಾಯಚೂರು<br>ಬೀದರ್ |

| | (2) ಕೋಷ್ಟಕ —4 ಮುಂದುವರಿದಿದೆ | (3) | (4) |
|---|---|---|---|
| ಕೆನರಾ ಸಿರ್ಸಿ | 1) ಹಳಿಯಾಳ 2) ಯಲ್ಲಾಪುರ | | |
| | 3) ಸಿರ್ಸಿ 4) ಕಾರವಾರ | | |
| | 5) ಹೊನ್ನಾವರ 6) ಸಿರ್ಸಿ (ಆ·ಸಂ·ದ) | | |
| | 7) ಧಾರವಾಡ (ಕಾರ್ಯ ಯೋಜನೆ) | | |
| | 8) ಸಿರ್ಸಿ (ಪಿ·ಎಂ·ಸಿ) | | |
| | 9) ಧಾರವಾಡ (ಪಿ·ಎಂ·ಸಿ) | | |
| | 10) ಸಿರ್ಸಿ (ಜಿ·ಎಫ್·ಪಿ·ಎಂ) | | |
| | 11) ಹೊನ್ನಾವರ (ಜಿ·ಎಫ್·ಪಿ·ಎಂ) | | |
| | 12) ಯಲ್ಲಾಪುರ (ಜಿ·ಎಫ್·ಪಿ·ಎಂ) | | |
| | 13) ಕಾರವಾರ (ಜಿ·ಎಫ್·ಪಿ·ಎಂ) | | |
| | 14) ದಾಂಡೇಲಿ (ಜಿ·ಟಿ·ಡಿ) | | |
| | 15) ಕಿರುವತ್ತಿ (ಜಿ·ಟಿ·ಡಿ) | | |
| ಶಿವಮೊಗ್ಗ | 1) ಶಿವಮೊಗ್ಗ | | |
| | 2) ಸಾಗರ | | |
| | 3) ಭದ್ರಾವತಿ | | |
| | 4) ಕೊಪ್ಪ | | |
| | 5) ಚಿಕ್ಕಮಗಳೂರು | | |
| | 6) ಶಿವಮೊಗ್ಗ (ಆ·ಸಂ·ದ) | | |
| ಬಳ್ಳಾರಿ | 1) ಚಿತ್ರದುರ್ಗ 2) ಬಳ್ಳಾರಿ 3) ರಾಯಚೂರು | | |
| | 4) ಗುಲ್ಬರ್ಗಾ 5) ಬಳ್ಳಾರಿ (ಆ·ಸಂ·ದ) | | |
| | 7) ಗುಲ್ಬರ್ಗಾ (ಆ·ಸಂ·ದ) 7) ಬೀದರ್ | | |

